ಷೇಕ್ಸ್‌ಪಿಯರಿನ ಸುಲಭ ಕನ್ನಡ ಕಥಾವಳಿ

1 ನೇ ಪುಸ್ತಕ

# ಸನ್ತಾಪಕ

---

ಷೇಕ್ಸ್‌ಪಿಯರ್ ಎಂಬ ಇಂಗ್ಲಿಷ್ ಮಹಾಕವಿಯು

ರಚಿಸಿದ

## ಹಾಮ್ಲೆಟ್, ಪ್ರಿನ್ಸ್ ಆಫ್ ಡೆನ್‌ಮಾರ್ಕ್

ಎಂಬ ನಾಟಕವನ್ನು ಅನುಸರಿಸಿ

ಟಿ. ಅಮ್ಮಣ್ಣಾಚಾರಿ

ರಚಿಸಿದುದು

---

ಈ ಲೇಖಕನ (ಷೇಕ್ಸ್‌ಪಿಯರ್) ಇತರ ಪುಸ್ತಕಗಳು

ಸಜೀವಪುತ್ಥಳಿ, ಅಸೂಯಾಪರಿಣಾಮ, ಸಿಂಧುಕುಮಾರಿ, ಜ್ಞಾನಮಂಜರಿ,
ಗಯ್ಯಾಳಿ, ನಳಿನಿ, ತೋರಭಕ್ತಿ, ಪಿತೃವಾತ್ಸಲ್ಯ ಮೊದಲಾದವುಗಳು.

ಪ್ರಕಾಶಕರು :

ಎನ್. ನಂಜುಂಡಯ್ಯ ಮತ್ತು ಸಹೋದರರು.



ಬೆಂಗಳೂರು ಸಿಟಿ
ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್‌ಯವರ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಲ್ಪಟ್ಟಿತು.

# ಪ್ರಸ್ತಾವನೆ

ಆಂಗ್ಲ ಮಹಾಕವಿಯಾದ ಷೇಕ್ಸ್‌ಪಿಯರನ "ಹಾಮ್ಲೆಟ್" ಎಂಬ ನಾಟಕವೇ "ಸನ್ತ್ಯಾಪಕ" ಎಂಬ ಈ ಸಣ್ಣ ಪುಸ್ತಕಕ್ಕೆ ಮೂಲವು. ಇದರ ಕಥಾವಸ್ತುವನ್ನು ನಮ್ಮ ಹಿಂದೂ ಜನಜೀವನಕ್ಕೆ ಬಳಸಿಕೊಂಡಿದ್ದೇನೆ. ನನ್ನ ದೇಶಬಾಂಧವರೂ ಭಾಷಾಭಿಮಾನಿಗಳೂ ಆದವರ ಸಹಾಯ ಪ್ರೋತ್ಸಾಹಗಳು ಲಭಿಸಿದ್ದೇಯಾದರೆ, ಈ ಕವಿಯ ನಾಟಕಗಳಲ್ಲಿ ಇನ್ನೂ ಕೆಲವನ್ನು ಇದೇರೀತಿಯಲ್ಲಿ ಪ್ರಕಟಿಸಬೇಕೆಂಬ ಆಶೆಯು ನನಗಿದೆ. ಇಂತಹ ಆಶೆಯಲ್ಲಿ ನನಗಿರುವ ಆಶಯಗಳೆರಡು—ಮೊದಲನೆಯದು, ಆ ಮಹಾಕವಿಯ ನಾಟಕಗಳನ್ನು ಇಂಗ್ಲಿಷ್ ಭಾಷಾ ಪರಿಚಯವಿಲ್ಲದ ಕನ್ನಡ ಜನಸಾಮಾನ್ಯಕ್ಕೆ ಪರಿಚಯ ಮಾಡುವುದು. ಎರಡನೆಯದಾಗಿ, ಇಂಗ್ಲಿಷ್ ಭಾಷೆಯಲ್ಲಿ ಪ್ರೌಢಶಿಕ್ಷಣವನ್ನು ಪಡೆಯಬೇಕೆಂದಿರುವ ವಿದ್ಯಾರ್ಥಿಗಳಿಗೂ, ವಿದ್ಯಾರ್ಥಿನಿಯರಿಗೂ ಅಲ್ಪಸ್ವಲ್ಪ ಸಹಾಯವಾಗುವಂತೆ ಮೊದಲೇ ಪರಿಚಯಮಾಡುವುದು.

ಈ ಸಣ್ಣ ಪುಸ್ತಕವು ಸ್ವಲ್ಪಮಟ್ಟಿಗಾದರೂ ತನ್ನ ಉದ್ದೇಶದಲ್ಲಿ ಫಲಕಾರಿಯಾದರೆ ಲೇಖಕನ ಶ್ರಮಕ್ಕೆ ತಕ್ಕ ಫಲವು ದೊರೆಯಿತೆಂದೇ ಭಾವನೆ.

"ವೃತ್ತಾಂತ ಪತ್ರಿಕೆಯ" ಸಂಪಾದಕರು "ಸನ್ತ್ಯಾಪಕ" ಎಂಬ ಈ ಕಥೆಯನ್ನು ತಮ್ಮ ಅಮೂಲ್ಯವಾದ ಪತ್ರಿಕೆಯಲ್ಲಿ ಪ್ರಕಟಿಸಿದುದು ಮಾತ್ರವಲ್ಲದೆ ಪುಸ್ತಕರೂಪದಲ್ಲಿ ಸಹ ಪ್ರಕಟಿಸಲು ಅಪ್ಪಣೆಯನ್ನು ಕೊಟ್ಟಿರುವುದರ ಮೂಲಕ ಲೇಖಕನನ್ನು ಪ್ರೋತ್ಸಾಹಿಸಿದುದಕ್ಕಾಗಿ ಅವರಿಗೂ, ಛಾಪಖಾನೆಯ ಮುಖ್ಯಸ್ಥರಿಗೂ ಕೃತಜ್ಞನು ನಾನು.

ಬೆಂಗಳೂರು ಸಿಟಿ
25—12—1936

ಟಿ. ಅಮೃತಾಚಾರಿ.

# ವಿ ಷ ಯ ಸೂ ಚಿ ಕೆ

# ಕಥೆಯಲ್ಲಿ ಬರುವವರ ಹೆಸರುಗಳು

---

| ಕನ್ನಡ ಹೆಸರು | ಇಂಗ್ಲೀಷ್ ಹೆಸರು | ಯಾರು |
|---|---|---|
| ಚಂದ್ರಶೇಖರ | ಹಾಮ್ಲೆಟ್ | ಅರಸನು |
| ಭುಜಂಗವು | ಕ್ಲಾಡಿಯಸ್ | ಚಂದ್ರಶೇಖರನ ತಮ್ಮನು |
| ಸನ್ತ್ರಾಪಕ | ಪ್ರಿನ್ಸ್ ಹಾಮ್ಲೆಟ್ | ಯುವರಾಜನು |
| ಕಪಟಾವತಿ | ಗೆರ್‌ಟ್ರೂ್ಯಡ್ | ಮಹಾರಾಣಿ |
| ಕುತಂತ್ರಿಕ | ಪೊಲೋನಿಯಸ್ | ಮಂತ್ರಿ |
| ಮೃದುಹೃದಯ | ಲಾರ್ಟಿಸ್ | ಕುತಂತ್ರಿಕನ ಮಗನು |
| ಪುಷ್ಪಮಾಲಿನಿ | ಒಫಿಲಿಯಾ | ಕುತಂತ್ರಿಕನ ಮಗಳು |
| ಸೌಮಿತ್ರಕ | ಹೊರೇಷಿಯೊ | ಸನ್ತ್ರಾಪಕನ ಮಿತ್ರನು |
| ರಂಜಿನಿ | .... | ಪುಷ್ಪಮಾಲಿನಿಯ ಸೇವಕಳು |
| ಚಂದ್ರಗಿರಿ | ಡೆನ್‌ಮಾರ್ಕ್ | ರಾಜಧಾನಿ |

---

# ಸನ್ತಾಪಕ

## ಅಧ್ಯಾಯ 1

### ಪಿತೃವಿಯೋಗ

ಸಾಯಂಕಾಲವಾಗುತ್ತಾ ಬಂದಿತು. ಸೂರ್ಯನು ಪಶ್ಚಿಮಾದ್ರಿಯಲ್ಲಿ ಸುವರ್ಣಪದಕದಂತೆ ಕಂಗೊಳಿಸುತ್ತಿದ್ದನು. ಪಕ್ಷಿಸಂಕುಲಗಳು ಚಿಲಿಪಿಲಿಗುಟ್ಟುತ್ತಾ ತಮ್ಮ ವಿಶ್ರಾಂತಿಗಾಗಿ ಗೂಡುಗಳನ್ನು ಸೇರುವುದಕ್ಕೆ ಪ್ರಾರಂಭಿಸಿದುವು. ಸ್ವಲ್ಪಹೊತ್ತಿನೊಳಗಾಗಿ ಪ್ರಪಂಚವೆಲ್ಲಾ ಮೊಬ್ಬಿನಿಂದ ಮುಸುಕಿತು. ಜನಸಂದಣಿಯು ಅಡಗಿತು. ಅರಮನೆಯ ಒಂದು ಕೊಟಡಿಯೊಳಗಿನಿಂದ ಒಬ್ಬ ವ್ಯಕ್ತಿಯು ಹೊರಟು ಅರಮನೆಗೆ ಅಂಟಿಕೊಂಡಿದ್ದ ಹೂದೋಟದ ಒಂದು ಶಿಲಾಸನದಮೇಲೆ ಕುಳಿತುಕೊಂಡನು. ಈ ವ್ಯಕ್ತಿಯೇ ನಮ್ಮ ಕಥಾನಾಯಕನಾದ ಸನ್ತಾಪಕನು. ಈತನೇ ಚಂದ್ರಗಿರಿಯ ಯುವರಾಜನು. ಈತನು ಹೂದೋಟದೊಳಕ್ಕೆ ಬಂದು ಕುಳಿತ ಕ್ಷಣಹೊತ್ತಿನೊಳಗಾಗಿಯೇ ಮಿತ್ರನಾದ ಸೌಮಿತ್ರಕನು ಬಂದು ಚಿಂತಾಸಂತಪ್ತನಾಗಿದ್ದ ಸನ್ತಾಪಕನನ್ನು ನೋಡಿ—ಯುವರಾಜಾ! ನೀನು ಯುಕ್ತಾಯುಕ್ತಗಳನ್ನು ಅರಿತವನು, ಧೈರ್ಯಶಾಲಿ, ಮಹಾಜ್ಞಾನಿಯು. ಇಂತಹವನಾದ ನೀನು ಅಜ್ಞಾನಿಯಂತೆ ದುಃಖಪಡುವುದುಚಿತವೇ? ಮನುಷ್ಯರಿಗೆ ದುಃಖಕ್ಕಿಂತಲೂ ಬೇರೆ ಹಗೆಯುಂಟೇ? ದುಃಖವಾದರೋ ಉತ್ಸಾಹವನ್ನು ತಗ್ಗಿಸುವುದು, ಧೈರ್ಯವನ್ನು ಹಾಳುಮಾಡುವುದು, ಬಲವನ್ನು ಕುಂದಿಸುವುದು,

ಬುದ್ಧಿಯನ್ನು ಮಂದಮಾಡುವುದು, ತೇಜಸ್ಸನ್ನು ನಂದಿಸುವುದು. ಇಂತಹ ಅಪಾಯಕಾರಿಯಾದ ದುಃಖವನ್ನು ಬಿಡು. ಲೋಕದಲ್ಲಿ ಜನನಮರಣಗಳು ಸ್ವಾಭಾವಿಕವಾದವುಗಳು. ಯಾರೂ ಚಿರಂಜೀವಿಗಳಾಗಿರುವುದಿಲ್ಲ. ದೃಶ್ಯವಸ್ತುಗಳೆಲ್ಲಾ ನಾಶಗತಿಯನ್ನೈದುವುವೆಂದು ನಿನಗೆ ತಿಳಿಯದೇ? ನೀನೇನು ಅಜ್ಞಾನಿಯೇ? ನಾನು ಈ ವಿಷಯದಲ್ಲಿ ನಿನಗೆ ಹೇಳಲು ಸಮರ್ಥನೇ? ಪಿತೃಮರಣಕ್ಕಾಗಿ ಇಷ್ಟು ದಿನಗಳು ದುಃಖಿಸಿದ್ದೇ ಸಾಕಾಗಿದೆ. ಚಂದ್ರಶೇಖರ ಭೂಪಾಲಕರು ದಿವಂಗತರಾದಾಗ್ಯೂ ಪ್ರಜಾನುರಾಗಿಗಳಾಗಿ ಅವರು ಪಡೆದ ಕೀರ್ತಿಯು ದಿಗಂತಗಳಲ್ಲಿ ವ್ಯಾಪಿಸಿದೆ. ಅವರು ಮೃತಿ ಹೊಂದಿದಾಗ್ಯೂ ಅವರ ಸತ್ಕ್ರಿಯೆಗಳು ಇನ್ನೂ ಜೀವಿಸಿವೆ. ಅವರ ಸುಗುಣ ಸುನಡತೆಗಳು ಪ್ರಜೆಗಳ ಹೃದಯತಲದಲ್ಲಿ ಬೇರೂರಿವೆ. ಆ ಮಹಾನುಭಾವನ ನೆನಪನ್ನು ಅಳಿಸಲು ಯಾರಿಂದಲೂ ಸಾಧ್ಯವಲ್ಲವು. ನೀನು ಆ ಮಹಾತ್ಮನ ಕುಮಾರನು. ನಿನ್ನನ್ನಾದರೂ ನೋಡಿಕೊಂಡು ಆದರಣೆಹೊಂದಬೇಕೆಂದು ಜನರು ಅಪೇಕ್ಷಿಸಿದಾಗ್ಯೂ ನೀನು ಅವರ ದೃಷ್ಟಿಗೆ ಬೀಳದೆ ಏಕಾಂತವಾಸಿಯಾಗಿ ಆಹಾರವಿಹಾರಗಳನ್ನು ತೊರೆದು ಚಿಂತಾಸಾಗರದಲ್ಲಿ ಮುಳುಗಿ ಹೋಗಿದ್ದೀ. ಯುವರಾಜಾ! ಏಳು, ಇರುಳಾಗುತ್ತಾ ಬಂದಿತು, ಅರಮನೆಗೆ ಹೋಗೋಣ. ನಿಮ್ಮ ಮಾತೃಶ್ರೀಯವರೂ, ಚಿಕ್ಕಪ್ಪನವರೂ ನಿನಗಾಗಿ ಕಾದು ಎದುರುನೋಡುತ್ತಿರಬಹುದು. ಚಿಂತಿಸಬೇಡ, ಏಳು. ನಾನಾಗಲಿ, ನೀನಾಗಲಿ, ಯಾರೇಯಾಗಲಿ ಒಂದಾನೊಂದು ದಿನ ಈ ಲೋಕವನ್ನು ಬಿಡಲೇಬೇಕೆಂದು ಅನೇಕ ಪರಿಯಿಂದ ಸಂತೈಸಲು ಯುವರಾಜನಾದ ಸಂತಾಪಕನು—ಅಯ್ಯಾ ಮಿತ್ರಾ, ನೀನು ಹೇಳುವುದೆಲ್ಲಾ ಸತ್ಯವೇ. ನನ್ನ ತಂದೆಯು, ಅಂತಹ ನನ್ನ ತಂದೆಯು ಸ್ವಾಭಾವಿಕವಾದ ಮರಣದಿಂದ ಕಾಲಾ

ಧೀನನಾಗಿದ್ದರೆ ನಾನು ಇಷ್ಟೊಂದು ಚಿಂತಿಸಿ ಇಂತಹ ಪರಿತಾಪವಾದ ಸ್ಥಿತಿಗೆ ಈಡಾಗುತ್ತಿರಲಿಲ್ಲ. ನನ್ನ ತಂದೆಯ ಮರಣದ ನಿಜಸ್ಥಿತಿಯನ್ನು ನಾನು ಅರಿಯದವನಾಗಿದ್ದೇನೆ. ಏನು ಮಾಡಲಿ? ಯಥಾರ್ಥವನ್ನು ಯಾರು ಹೇಳುವರು? ನನ್ನ ಪಿತೃವಿಗೆ ಸರ್ಪ ಕಡಿಯಿತೆಂತಲೂ, ಆ ಮೂಲಕ ಆತನು ಮೃತಿಹೊಂದಿದನೆಂತಲೂ ನಮ್ಮ ಚಿಕ್ಕಪ್ಪನಾದ ಭುಜಂಗನುನು ಹೇಳುತ್ತಾನೆ. ಆ ಸಮಯದಲ್ಲಿ ನಾನು ನನ್ನ ತಂದೆಯ ಸಮೀಪದಲ್ಲಿ ಇಲ್ಲದೆಹೋದೆನಲ್ಲಾ! ಹಾ! ಮಿತ್ರಾ! ನನ್ನ ಪ್ರಿಯ ತಂದೆಯನ್ನು ನಾನು ಮರೆಯುವುದು ಹೇಗೆ? ಎಂದು ಇದ್ದಕ್ಕಿದ್ದಹಾಗೇ ತಂದೆಯ ನೆನಪಿನಿಂದ ದುಃಖವು ಉಕ್ಕಿಬರಲು ದೊಡ್ಡ ಶಬ್ದದಿಂದ ಹಾ! ನನ್ನ ಪಿತೃವೇ! ಪಿತೃವೇ! ಎಲ್ಲಿರುವೆ? ನನ್ನನ್ನು ಹತಭಾಗ್ಯನನ್ನಾಗಿ ಮಾಡಿ ಇಹಲೋಕ ಯಾತ್ರೆಯನ್ನು ಸಮಾಪ್ತಿ ಮಾಡಿಕೊಂಡೆಯಾ! ನಾನು ಜೀವಿಸುವುದೆಂತು? ನಾನು ನಿನ್ನ ಮುಖಕಮಲವನ್ನು ನೋಡುವುದೆಂತು? ನಾನು ಇನ್ನು ಅಪ್ಪಾ! ಅಪ್ಪಾಜೀ! ಅಪ್ಪಯ್ಯಾ! ಎಂದು ಯಾರನ್ನು ಕರೆಯಲಿ? ದೀರ್ಘಕಾಲ ನಿನ್ನ ಪಾದಸೇವೆಯನ್ನು ಮಾಡುವ ಭಾಗ್ಯವು ನನಗೆ ಲಭಿಸದೇ ಹೋಯಿತೇ! ಹಾ! ಸ್ವಾಮೀ! ಭಗವಂತಾ! ನನ್ನ ವಿಷಯದಲ್ಲಿ ನೀನು ಇಷ್ಟು ನಿಷ್ಕರುಣೆಯಾಗಿರಲು ನಾನು ಮಾಡಿದ ಅಪರಾಧವೇನು? ನನ್ನ ತಂದೆಯನ್ನು ಕಡಿದ ಸರ್ಪವು ನನ್ನನ್ನು ಯಾಕೆ ಕಡಿಯಬಾರದಿತ್ತು? ಅಂತಹ ತಂದೆಯನ್ನು ಕಳೆದುಕೊಂಡು ನಾನು ಮಾಡುವುದೇನಿದೆ? ಎಂದು ರೋಧಿಸಿದನು. ಇವನ ದುಃಖವನ್ನು ನೋಡಿ ನಹಿಸುವುದು ಸಮೀಪದಲ್ಲಿದ್ದ ಮಿತ್ರನಾದ ಸೌಮಿತ್ರಕನಿಗೆ ತಾಳಲಾರದಾಯಿತು. ಆದರೂ ಧೈರ್ಯತಂದುಕೊಂಡು ತನ್ನ ದುಃಖವನ್ನು ಒತ್ತಟ್ಟಿಗಿಟ್ಟು— ಮಿತ್ರಾ! ಯುವರಾಜಾ! ಇದುವರೆಗೂ ನಾನು ಹೇಳಿದ

ಆದರಣೆಯ ವಾಕ್ಯಗಳು ಒಂದೂ ಕೆಲಸಕ್ಕೆ ಬಾರದ್ದಾಯಿತು. ಬಹಳ ಕತ್ತಲಾಯಿತು. ಹೋಗೋಣ ಬಾ ಎಂದು ಕೈಹಿಡಿದು ಕರೆದುಕೊಂಡುಹೋಗಿ ಅರಮನೆಯಲ್ಲಿ ಬಿಟ್ಟು ಸ್ವಗೃಹಕ್ಕೆ ಹೊರಟು ಹೋದನು.

ಆ ರಾತ್ರಿ ಸನ್ತಾಪಕನಿಗೆ ನಿದ್ರೆಯೇ ಬರಲಿಲ್ಲ. ಮನಸ್ಸಿನ ದುಃಖ, ಅವಿಶ್ರಾಂತಿ, ಭಾರ, ಇವುಗಳನ್ನು ಸಹಿಸಲಸಾಧ್ಯವಾಯಿತು. ತಂದೆಯ ಸೌಮ್ಯವಾದ ಮುಖಭಾವವು ತನ್ನೆದುರಿನಲ್ಲಿ ಇದ್ದಂತೆಯೇ ಇತ್ತು. ಆ ರಾತ್ರಿಯನ್ನು ಬಹು ಪ್ರಯಾಸದಿಂದ ಕಳೆಯುತ್ತಾ ಸೂರ್ಯೋದಯವನ್ನೇ ನಿರೀಕ್ಷಿಸುತ್ತಿದ್ದನು. ಹಾಗೂ ಹೀಗೂ ಬೆಳಗಾಯಿತು. ಮಿತ್ರನಾದ ಸೌಮಿತ್ರಕನು, ಯುವರಾಜನು ಈ ದಿನ ಹೇಗಿದ್ದಾನೆಯೋ ನೋಡೋಣ ಎಂದು ಅರಮನೆಗೆ ಬಂದನು. ರಾಜಕುಮಾರ ಸನ್ತಾಪಕನು ಎಂದಿನಂತೆ ಕಣ್ಣೀರಿಡುತ್ತಾ ಯೋಚನಾಪರನಾಗಿ ಪುಷ್ಪಕೋದ್ಯಾನದ ಕಡೆಗೆ ನೋಡುತ್ತಾ ಕುಳಿತಿದ್ದನು. ಇವನನ್ನು ನೋಡಿದ ಸೌಮಿತ್ರಕನು ಸಹ ಚಿಂತಾಸಂತಪ್ತನಾಗಿ— ಯುವರಾಜಾ! ಇನ್ನೂ ನಿನ್ನ ದುಃಖವು ಕೊನೆಗಾಣಲಿಲ್ಲವೇ?

ಸನ್ತಾಪಕ:—ಮಿತ್ರಾ, ನನ್ನ ಪ್ರಿಯ ತಂದೆಯಂತೆ ನಾನು ಸಹ ಯಾವಾಗ ಭೂಗರ್ಭವನ್ನು ನನ್ನ ವಾಸಸ್ಥಳವಾಗಿ ಮಾಡಿಕೊಳ್ಳುತ್ತೇನೋ ಅಂದೇ ನನ್ನ ಚಿಂತಾಸಮಾಪ್ತಿ ಎಂದು ತಿಳಿ. ಅದುವರೆಗೂ ನಾನು ಈ ಚಿಂತೆಯಿಂದ ವಿಮುಕ್ತನಾಗುವಂತೆ ತೋರಲಿಲ್ಲ.

ಸೌಮಿತ್ರಕ:—ಯುವರಾಜಾ! ನೀನು ಎಷ್ಟು ಚಿಂತಿಸಿದರೂ ಮೃತಿಹೊಂದಿದ ನಿನ್ನ ಪ್ರಿಯ ತಂದೆಯು ಎದ್ದು ಬರಬಹುದೇ? ಅಸಾಧ್ಯವಾದುದನ್ನು ಸಾಧ್ಯಪಡಿಸಲು ಆದೀತೇ? ಹೀಗೆ ನೀನು

ಚಿಂತಿಸಿ ನಿನ್ನ ದೇಹವನ್ನು ಕೃಶಮಾಡಿಕೊಳ್ಳಬೇಡ. ತಂದೆಯು ಮೃತಿಹೊಂದಿದರೂ ಹೆತ್ತತಾಯಿ ಇರಬೇಕೆಂದು ಹಿರಿಯರು ಹೇಳುತ್ತಾರಲ್ಲಾ. ತಂದೆಯ ವಿಷಯ ಚಿಂತಿಸಿ ಹಿರಿಯರ ಅನುಭವ ಪೂರ್ವಕವಾದ ಮಾತನ್ನು ಅಸತ್ಯಮಾಡುತ್ತೀಯೇ. ಬಾ, ಹೂ ದೋಟಕ್ಕೆ ಹೋಗಿ ವಿಹರಿಸೋಣ.

ಸನ್ತಾಪಕ:—ಮಿತ್ರಾ, ಲೋಕದಲ್ಲಿ ಎಲ್ಲರ ವಿಷಯ ದಲ್ಲಿಯೂ ಹಿರಿಯರ ಆ ಅನುಭವವು ನಿಜವಿರಬಹುದೇನೋ ; ನನ್ನ ವಿಷಯದಲ್ಲಂತೂ ಅದು ಸುಳ್ಳೇ ಆಗಿದೆ. ನನ್ನಂತಹ ನಿರ್ಭಾಗ್ಯನು ಈ ಲೋಕದಲ್ಲಿರುವನೇ ? ನನ್ನ ಪ್ರಿಯತಂದೆಗೆ ಬದಲಾಗಿ ನನ್ನ ತಾಯಿಯು ಸತ್ತಿದ್ದರೆ ಸರ್ವೋತ್ತಮವಾಗಿದ್ದಿತು. ಈ ಮಾತನ್ನು ನಾನು ಹೇಳಬೇಕಾದರೆ ನನ್ನ ಹೃದಯವು ಎಷ್ಟು ಸಂಕಟಗೊಳ್ಳು ತ್ತದೆಯೋ ಅದು ನಿನಗೆ ತಿಳಿಯದ ಸಂಗತಿಯಲ್ಲ. ಮಿತ್ರನೇ, ಲೋಕದಲ್ಲಿ ತಾಯಿಗಿಂತಲೂ ಬಂಧುವಿಲ್ಲ. ಅಂತಹ ಬಂಧುವಾದ ತಾಯಿಯೇ ನನಗೂ ದಿವಂಗತನಾದ ನನ್ನ ತಂದೆಗೂ ಶತ್ರುವಾದ ಮೇಲೆ ಮಾಡುವುದೇನು ? ಅಕಟಾ ! ನನ್ನಂತಹ ನಿರ್ಭಾಗ್ಯನು ಈ ಪೃಥ್ವಿಯಲ್ಲಿ ಯಾರಾದರೂ ಇರುವರೇ ? ನನ್ನ ಹೃದಯತಾಪವನ್ನು ಸಹಿಸುವುದೆಂತು ? ಏನು ? ನನ್ನ ತಂದೆಯು ಕಾಲವಾಗಿ ಇನ್ನೂ ಎರಡುತಿಂಗಳು ಪೂರ್ತಿಯಾಗಲಿಲ್ಲವಲ್ಲಾ............ !

ಸ್ನೇಹಿತನೇ, ನೀನು ಹೇಳುವುದೆಲ್ಲಾ ಸತ್ಯ. ನನ್ನ ಪ್ರಿಯ ತಂದೆಯು ಒಂದು ದಿನವಾದರೂ ರೋಗಪೀಡಿತನಾಗಿರಲಿಲ್ಲ. ಹಾಗೆ ರೋಗಪೀಡಿತನಾಗಿ ಮರಣಹೊಂದಿದ್ದರೆ ನಾನೇಕೆ ಇಷ್ಟು ಚಿಂತಿಸ ಬೇಕಾಗಿದ್ದಿತು ? ಆ ಆ ಪ್ರಿ....ಯ....ಯ....ತಂದೆಯ ಮರಣದ ವಿಷಯ ನನಗಾದರೋ ಬಹಳ ಅನುಮಾನವಾಗಿದೆ. ಈಗ ನಮ್ಮ

ತಂದೆಯ ರಾಜ್ಯವನ್ನು ಸ್ವಾಧೀನಪಡಿಸಿಕೊಂಡಿರುವ ನಮ್ಮ ಚಿಕ್ಕಪ್ಪ ನಾದ ಭುಜಂಗಮನಾದರೋ ನಮ್ಮ ತಂದೆಯು ಸರ್ಪ ಕಡಿದು ಮರಣಹೊಂದಿದನೆಂದು ಹೇಳುತ್ತಿದ್ದಾನೆ. ನಮ್ಮ ತಂದೆಯನ್ನು ಕಡಿದ ಆ....ಆ....ಸರ್ಪವು ನಮ್ಮ ಚಿಕ್ಕಪ್ಪನೇ ಆಗಿರಬಹುದೇ? ನಮ್ಮ ತಂದೆಯ ಮರಣದ ಯಥಾರ್ಥ ಸಂಗತಿಯನ್ನು ತಿಳಿಸು ವವರು ಯಾರೂ ಇಲ್ಲವಲ್ಲಾ ! ಏನುಮಾಡಲಿ ? ನನ್ನ ತಾಯಿಯೆಂದು ನೀನು ಹೇಳುವ ಮಹಾರಾಣಿಯಾದ ಕಪಟಾವತಿಯು ಗತಿಸಿದ ನನ್ನ ತಂದೆಯನ್ನು ಮರೆತು, ನನ್ನ ತಂದೆಯ ತಮ್ಮನೂ ನನ್ನ ಚಿಕ್ಕಪ್ಪನೂ ಆದ ಭುಜಂಗಮನನ್ನು ವಿವಾಹವಾಗಿ ಸುಖಭೋಗ ಗಳಿಂದ ಮೆರೆಯುತ್ತಿದ್ದಾಳೆ ! ಒಬ್ಬ ಸ್ತ್ರೀಗೆ ತನ್ನ ಪತಿಯ ತಮ್ಮನು ಮೈದುನನಲ್ಲವೇ ? ಮೈದುನನಾದವನು ಮಗನಸಮಾನನಲ್ಲವೇ ? ಪುರುಷನಾದವನಿಗೆ ತನ್ನ ಅಣ್ಣನ ಪತ್ನಿಯು ಅತ್ತಿಗೆಯಲ್ಲವೇ ? ಅತ್ತಿಗೆಯಾದವಳು ತಾಯಿಯ ಸಮಾನಳಲ್ಲವೇ ? ಹೀಗಿದ್ದಾಗ್ಯೂ ಲೋಕಮರ್ಯಾದೆಯನ್ನೇ ತೊರೆದು ಮಾನವಭಯನಿಂದೆಗಳೂ ದೈವಭಯವೂ ಇಲ್ಲದವರಾಗಿ ಶಾಸ್ತ್ರಕ್ಕೆ ವಿರೋಧವಾಗಿಯೂ, ಆತ್ಮ ಸಾಕ್ಷಿಗೆ ವಿರೋಧವಾಗಿಯೂ ವರ್ತಿಸುತ್ತಿದ್ದಾರೆ ! ಆಹಾ ! ಮಿತ್ರಾ! ಭುಜಂಗಮ ಮತ್ತು ಕಪಟಾವತಿ ಎಂಬ ನಾಮಾಂಕಿತಗಳು ಇವರಿಗೆ ಸಲ್ಲತಕ್ಕವುಗಳಾಗಿಯೇ ಇವೆ. ತಂದೆಯು ತೀರಿಹೋದ ದುಃಖವು ಒಂದುಕಡೆ ಬಾಧಿಸುತ್ತಿದ್ದರೆ, ತಾಯಿಯಾದವಳು ಮಾಡಿದ ದುಷ್ಕೃತ್ಯವು ಮತ್ತೊಂದು ಕಡೆ ಬಾಧಿಸುತ್ತಿದೆ. ಅಡಿಕೇಕತ್ತರಿಯ ನಡುವೆ ಸಿಕ್ಕಿರುವ ಅಡಿಕೆಯಸ್ಥಿತಿಯೂ ನನ್ನ ಸ್ಥಿತಿಯೂ ಸಮ ವಾಗಿಯೇ ಇದೆ. ನನ್ನ ತಂದೆಯು ಜೀವಂತನಾಗಿದ್ದಾಗ ನನ್ನ ತಾಯಿಯು ಮಹಾಪತಿವ್ರತೆಯಂತೆ ನಟಿಸುತ್ತಿದ್ದಳಲ್ಲಾ ! ನನ್ನ ತಂದೆಯ ಮುಖವನ್ನು ಒಂದುಘಳಿಗೆಯಹೊತ್ತು ಕಾಣದಿದ್ದರೆ ತನ್ನ

ಜೀವರತ್ನವನ್ನೇ ಕಳೆದುಕೊಂಡವಳಂತೆ ಸಂಕಟಪಡುತ್ತಿದ್ದಳಲ್ಲಾ ! ನನ್ನ ತಂದೆಯು ನನ್ನ ತಾಯಿಯನ್ನು ಎಷ್ಟಾಗಿ ಪ್ರೀತಿಸುತ್ತಿದ್ದನೋ ಅದನ್ನೆಲ್ಲಾ ಕ್ಷಣದಲ್ಲಿಯೇ ಮರೆತು ಕಾಮಾತುರತೆಯಿಂದ ಮಗನಿಗೆ ಸಮಾನನಾದ ಮೈದುನನನ್ನೇ ಮದುವೆಯಾಗಿ ನನ್ನ ತಂದೆಯ ಸಿಂಹಾಸನದಲ್ಲಿ ಕೂಡಿಸಿದಳು. ಇಂತಹ ಸ್ತ್ರೀಯರೂ ಸಹ ಲೋಕವಲ್ಲಿದ್ದಾರೆಂದು ನನಗೆ ತಿಳಿದಿರಲಿಲ್ಲ. ಸಾಧಾರಣ ಸ್ತ್ರೀಯರೇ ಇಂತಹ ಹೇಯಕೃತ್ಯವನ್ನು ಮಾಡಲು ಅಹಸ್ಯಪಡುವಾಗ ತಾನು ಇಂತಹ ದೊಡ್ಡ ರಾಜ್ಯಕ್ಕೆ ಮಹಾರಾಣಿಯೂ ಮಾತೃಪ್ರಾಯಳೂ ಆಗಿದ್ದಾಗ್ಯೂ ಲೋಕವಿರುದ್ಧವಾದ ದುಷ್ಕೃತ್ಯವನ್ನು ಮಾಡಿ ಕೀರ್ತಿವಂತನಾದ ನನ್ನ ತಂದೆಗೆ ಅಪಕೀರ್ತಿಯನ್ನು ತಂದಳು. ಛೀ, ಛೀ, ಈಕೆಯು ತಾಯಿಯೋ ನಾಯಿಯೋ ? ಮಿತ್ರಾ, ನನ್ನ ತಂದೆಯ ಸಿಂಹಾಸನವು ನನಗೆ ತಪ್ಪಿತೆಂದು ಲೇಶಾಂಶವೂ ನಾನು ಚಿಂತಿಸುವುದಿಲ್ಲ; ದುಃಖಿಸುವುದೂ ಇಲ್ಲ. ನನ್ನ ತಾಯಿಯು ಮಾಡಿರುವ ದುಷ್ಕಾರ್ಯಕ್ಕಾಗಿ ಬಹಳವಾಗಿ ಚಿಂತಿಸುತ್ತೇನೆ. ನನ್ನ ತಂದೆಯ ಮರಣಕ್ಕೆ ಸರ್ಪವೇ ಕಾರಣವೆಂದು ನನ್ನ ತಾಯಿಯ ಗಂಡನೂ, ನನ್ನ ಚಿಕ್ಕಪ್ಪನೂ, ಈಗ ಅರಸನೂ ಆಗಿರುವ ಭುಜಂಗನು ಹೇಳುತ್ತಾನೆ. ನಾನು ಇದನ್ನು ನಂಬಲಾರೆನು. ನನ್ನ ತಂದೆಯನ್ನು ಕೊಂದು, ಆತನ ರಾಜ್ಯವನ್ನೂ ಪತ್ನಿಯನ್ನೂ ಅಪಹರಿಸುವ ಉದ್ದೇಶದಿಂದ ಇವನೇ ಯಾಕೆಮಾಡಿರಬಾರದು? ಇದಕ್ಕಾಗಿ ನಮ್ಮ ತಂದೆಯು ಜೀವದಿಂದಿರುವಾಗಲೇ ಒಳಸಂಚು ನಡೆದಿರುವುದರಲ್ಲಿ ಸಂಶಯವೇನು ? ನನ್ನ ತಾಯಿಯು ಈ ದುಷ್ಟನಿಗೆ ಸಹಾಯಕಳಾಗಿದ್ದಳೆಂಬುವುದಕ್ಕೆ ಅನುಮಾನವೇನು ? ಸ್ತ್ರೀಯರಿಗೆ ಲೋಕದಲ್ಲಿ ಪಾತಿವ್ರತ್ಯವೇ ಭೂಷಣಪ್ರಾಯವು. ಅಂತಹ ಭೂಷಣಪ್ರಾಯವಾದ ಪಾತಿವ್ರತ್ಯವನ್ನೇ ಮೈದುನನಿಗೆ ಮಾರಿಬಿಟ್ಟಳಲ್ಲಾ ! ಮಿತ್ರಾ, ಇವೆಲ್ಲವನ್ನೂ ನಾನು

ದೀರ್ಘವಾಗಿ ಆಲೋಚಿಸಿದ್ದೇ ಆದರೆ, ನನ್ನ ಪ್ರಿಯ ತಂದೆಯನ್ನು ಕಚ್ಚಿ ಕೊಂದ ಸರ್ಪವೇ ಈಗ ಆತನ ಸಿಂಹಾಸನದಮೇಲೆ ಕೂತು ಆತನ ರಾಜ್ಯವನ್ನೂ ಪತ್ನಿಯನ್ನೂ ಆಳುವಂತೆ ತೋರುತ್ತದೆ. ಏನು ಮಾಡಲಿ ? ನನ್ನ ತಂದೆಯ ಮರಣದ ಯಥಾರ್ಥತ್ವವನ್ನು ನಾನು ಕಂಡುಹಿಡಿಯುವ ಬಗೆಹೇಗೆ ? ನಾನಾದರೋ ಈ ನನ್ನ ತಾಯಿಂದ ಉಂಟಾಗಿರುವ ಅಪಮಾನವನ್ನು ಸಹಿಸಿಕೊಂಡಿರಲು ಹೇಗೆ ಸಾಧ್ಯವಾದೀತು ? ನನ್ನೊಳಗಿದ್ದ ಉತ್ಸಾಹವೆಲ್ಲಾ ಹೋಯಿತು. ಲೋಕವೇ ! ಆಹಾ ! ಲೋಕವೇ ! ನಿನ್ನಲ್ಲಿ ಸಂತೋಷಪಡುತ್ತಿದ್ದ ನನಗೆ ಈಗ ಕಾರ್ಗತ್ತಲು ಕವಿದಿರುವ ಸ್ಮಶಾನ ದಂತಾದೆಯಾ ! ತಂದೆಯೇ ! ನೀನು ಸಾಯುವ ಮೊದಲು ನಿನ್ನ ಖಡ್ಗದಿಂದ ನನ್ನನ್ನು ಕೊಂದು ತರುವಾಯ ನೀನು ಮೃತನಾಗಿದ್ದರೆ ಇಂತಹ ದುಃಖಕ್ಕೂ ಅಪಮಾನಕ್ಕೂ ತುತ್ತಾಗುತ್ತಿದ್ದೆನೇ ! ಹಾ ! ಅಪ್ಪಾ ! ಅಪ್ಪಾಜೀ ! ಅಪ್ಪಯ್ಯಾ ! ಎಂದು ರೋಧಿಸುತ್ತಾ ಮೂರ್ಛಿತನಾದನು.

ಆಪ್ತನಾಗಿದ್ದ ಸೌಮಿತ್ರಕನು ಸಮೀಪದಲ್ಲಿಯೇ ಇದ್ದನು. ಈತನೂ ಸಹ ಚಂದ್ರಗಿರಿಯಲ್ಲಿ ತನ್ನ ಮಿತ್ರನ ತಂದೆಯಾದ ಚಂದ್ರ ಶೇಖರ ರಾಯನು ತೀರಿಹೋದನಂತರ ನಡೆದ ಅಪಮಾನಾಸ್ಪದವಾದ ಕಾರ್ಯಗಳಿಗಾಗಿ ಬಹಳ ಚಿಂತಿಸುತ್ತಿದ್ದನು. ಯುವರಾಜನಾದ ಸನ್ತಾಪಕನನ್ನು ಆದರಿಸಿ ಧೈರ್ಯಗೊಳಿಸುವುದು ತನ್ನಿಂದ ಸಾಧ್ಯ ವಾಗದ ಕಾರ್ಯವೆಂದೇ ನಿರ್ಧರಿಸಿದನು. ಆದರೂ ಧೈರ್ಯ ವನ್ನಾಂತು ಮೂರ್ಛಿತನಾಗಿ ಭೂಮಿಗೊರಗಿರುವ ರಾಜಕುಮಾರ ನನ್ನು ತಕ್ಕ ಶೈತ್ಯೋಪಚಾರಗಳಿಂದ ಎಚ್ಚರಗೊಳಿಸಿದ ಸ್ವಲ್ಪ ಹೊತ್ತಿನೊಳಗಾಗಿಯೇ ರಾಜಕುಮಾರನಾದ ಸನ್ತಾಪಕನ ತಾಯಿ ಯಾದ ಮಹಾರಾಣಿಯು ಮತ್ತು ಈಕೆಯ ದ್ವಿತೀಯ ಪತಿಯಾದ

ಭುಜಂಗಮನು ಇಬ್ಬರೂ ರಾಜಪುತ್ರನನ್ನು ಅರಮನೆಯಲ್ಲೆಲ್ಲಾ ಹುಡುಕಿ ಕಡೆಗೆ ಹೂದೋಟಕ್ಕೆ ಬಂದು ಮುಗಸಿರುವ ಸ್ಥಿತಿಯನ್ನು ನೋಡಿ ಸ್ತಬ್ಧರಾದರು. ಸನ್ತಾಪಕನಿಗಾದರೋ ಅವರಿಬ್ಬರ ಮುಖ ವನ್ನು ನೋಡಿದ ಕೂಡಲೇ ಧಗಧಗಿಸುವ ಬೆಂಕಿಯಮೇಲೆ ರಾಳದಪುಡಿ ಯನ್ನು ದುರಿಸಿದ ಹಾಗಾಯಿತು. ಸೌಮಿತ್ರಕನಿಗೂ ಇವರಂತೆಯೇ ಆಗಿ ಮುಖವನ್ನೇ ಮತ್ತೊಂದುಕಡೆಗೆ ತಿರುಗಿಸಿಕೊಂಡನು ಯಾರಿಂದಲೂ ಒಂದು ಮಾತಾದರೂ ಹೊರಡಲೇ ಇಲ್ಲ.

ಕಡೆಗೆ ಮಹಾರಾಣಿಯಾದ ಕಪಟಾವತಿಯು ರಾಜಪುತ್ರನನ್ನು ನೋಡಿ—ಕುಮಾರಾ! ಏನಿದು ನಿನ್ನವಸ್ಥೆ? ನಿನ್ನ ತಂದೆಗಾಗಿ ಇನ್ನೆಷ್ಟು ದಿನಗಳು ಹೀಗೆ ಚಿಂತಿಸುತ್ತಿರುತ್ತೀ? ನಿನ್ನ ತಂದೆಯು ಹೋದರೂ ತಾಯಿಯಾದ ನಾನಿಲ್ಲವೇ? ನಾನು ಇರುವಲ್ಲಿ ನನ್ನ ಮುದ್ದು ಕಂದನಾದ ನೀನು ಹೀಗೆ ದುಃಖಿಸುವುದು ವಿಹಿತವೇ? ಎಲ್ಲಾ ಕಾರ್ಯಗಳಲ್ಲೂ ನಿರುತ್ಸಾಹಿಯಾಗಿ, ಆಹಾರವಿಹಾರಗಳನ್ನು ತ್ಯಜಿಸಿ, ಕೋಮಲವಾದ ನಿನ್ನ ಶರೀರವು ಕ್ಷಯಿಸಿಹೋಗುವಂತೆ ಮಾಡಿಕೊಂಡಿದ್ದೀಯಲ್ಲಾ! ತಾಯಿಯಾದ ನಾನು ನಿನ್ನ ಚಿಕ್ಕಪ್ಪ ನನ್ನು ವಿವಾಹವಾದ ದಿವಸವೂ ಆತನ ಸಿಂಹಾಸನಾರೋಹಣದ ದಿವಸವೂ ರಾಜ್ಯದ ಪ್ರಜೆಗಳೆಲ್ಲರೂ ಸಂತೋಷಪಡುತ್ತಿದ್ದಾಗ್ಯೂ, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಾದ ನೀನು ಯಾವವಿಧದಲ್ಲಿ ಯಾದರೂ ಸಂತೋಷವನ್ನು ತೋರ್ಪಡಿಸದೆ ವೃದ್ಧ ಸನ್ಯಾಸಿಯಂತೆ ನಿನ್ನ ಕೊಠಡಿಯಲ್ಲಿ ಗೋಳಾಡುತ್ತಾ ಕುಳಿತಿದ್ದೆ. ನಾನು ನಿನ್ನನ್ನು ಹೊತ್ತು ಹೆತ್ತು ಸಲಹಿದ್ದಕ್ಕೆ ಪ್ರತಿಫಲ ಇದೇನೋ? ಏನು? ಆ ತಂದೆಯು ಹೋದರೆ ಈ ತಂದೆಯಿಲ್ಲವೇ? ನಾವಿಬ್ಬರೂ ನಿನ್ನ ವಿಷಯವಾಗಿ ಎಷ್ಟು ಚಿಂತೆಪಡುತ್ತಿದ್ದೇವೆಂದು ನೀನರಿಯೆ. ಸೌಮಿತ್ರಕಾ, ರಾಜಕುಮಾರನನ್ನು ಬೇಗ ಕರೆದುಕೊಂಡು ಬಾ.

ನಾವಿಬ್ಬರೂ ಹೋಗುತ್ತೇವೆ ಎಂದು ಅರಮನೆಗೆ ಹೊರಟು ಹೋದರು.

ತಾಯಿ ಆಡಿದ ಪ್ರತಿಯೊಂದು ಮಾತೂ ವಿಷಮಯವಾಗಿರುವ ಕೂರಲಗುಗಳಿಗೆ ಸಮಾನವಾಗಿ ನಮ್ಮಾಪಕನ ಹೃದಯವನ್ನು ಗಾಯಗೊಳಿಸಿದವು. ತನ್ನ ತಂದೆಯ ಸ್ಥಾನದಲ್ಲಿದ್ದ ಭುಜಂಗನು ನನ್ನು ನೋಡಿ ರಾಜಕುಮಾರನಿಗುಂಟಾದ ವೇದನೆಯೂ ಆಕ್ರೋಶವೂ ವರ್ಣಿಸಲಸಾಧ್ಯವಾಯಿತು. ವಿಶ್ವಾಸ ಘಾತುಕಳಾದ ತಾಯಿಯ ಮುಖವು ಅವನ ದೃಷ್ಟಿಗೆ ಕರಾಳವದನಳಾದ ಮಹಾಮಾರಿಯ ಮುಖದಂತೆ ಕಂಗೊಳಿಸುತ್ತಿದ್ದಿತು. ಈಕೆಯ ಮಾತುಗಳೆಲ್ಲಾ ಕಪಟಯುಕ್ತವಾದವುಗಳೆಂದು ಸಂಪೂರ್ಣವಾಗಿ ತಿಳಿದುಕೊಂಡು,

ಸೌಮಿತ್ರಕನನ್ನು ನೋಡಿ—ಮಿತ್ರಾ, ಭ್ರಾತೃದ್ರೋಹಿಯಾದ ನಮ್ಮ ಚಿಕ್ಕಪ್ಪನ, ಪತಿದ್ರೋಹಿಯಾದ ನನ್ನ ತಾಯಿಯ ಮುಖಗಳನ್ನು ನೋಡಿಕೊಂಡು ಜೀವಿಸಿರುವುದು ನನಗೆ ಕಷ್ಟವೆಂದು ತೋರುತ್ತದೆ. ನನ್ನ ತಂದೆಯು ಜೀವದಲ್ಲಿದ್ದಾಗ ನಾನು ನನ್ನ ತಾಯಿಯ ವಿಷಯದಲ್ಲಿ ಬಹು ಗಾಂಭೀರ್ಯಾಭಿಪ್ರಾಯವುಳ್ಳವನಾಗಿದ್ದೆನು. ಈಗಲಾದರೋ ನನಗೆ ಅಂತಹ ಅಭಿಪ್ರಾಯವಿಲ್ಲ. ಈಕೆಯಿಂದ ನನಗೂ ಗತಿಸಿದ ನನ್ನ ತಂದೆಗೂ ಉಂಟಾಗಿರುವ ಅಪಮಾನವು ಸಹಿಸಲಸದಳವಾಗಿದೆ. ನನ್ನ ತಂದೆಯ ಮರಣದ ವಿಷಯದಲ್ಲಿಯಾದರೋ ನನಗೆ ಬಹಳ ಅನುಮಾನವಾಗಿದೆ. ಈ ವಿಷಯದಲ್ಲಿ ಯಥಾರ್ಥವೇನೆಂಬುದನ್ನು ತಿಳಿಯಲು ಏನು ಮಾಡಲೋ ತಿಳಿಯದು. ನನ್ನ ತಂದೆಯು ಸ್ವಪ್ನದಲ್ಲಿಯಾದರೂ ಬಂದು ತಿಳಿಸಬಾರದೇ ಎಂದು ಹೇಳುತ್ತಿರುವಷ್ಟರಲ್ಲಿ

ಸೌಮಿತ್ರಕನು—ಮಿತ್ರನೇ, ನಿನಗೆ ಒಂದು ಸಮಾಚಾರವನ್ನು ಹೇಳುವುದನ್ನು ಮರೆತೆನು.

ಸನ್ತಾಪಕ—ಏನು ಸಮಾಚಾರ ?

ಸೌಮಿತ್ರಕ—ಪ್ರತಿ ರಾತ್ರಿಯೂ ಅರಮನೆಯ ಎದುರಿನಲ್ಲಿ ಸಿಪಾಯಿಗಳು ಪಹರಿ ಕೊಡುತ್ತಿರುವುದು ನಿನಗೆ ತಿಳಿದಿದೆಯಷ್ಟೆ.

ಸನ್ತಾಪಕ—ಹೌದು, ತಿಳಿದಿದೆ ; ಕೊಟ್ಟರೆ ಏನು ?

ಸೌಮಿತ್ರಕ—ಕಳೆದ ಎರಡು ಮೂರು ದಿನಗಳಿಂದ ಮಧ್ಯ ರಾತ್ರಿಯಲ್ಲಿ ಗತಿಸಿದ ನಿಮ್ಮ ತಂದೆಯವರು ಅರಮನೆಯ ಸಮೀಪ ದಲ್ಲಿ ತಿರುಗಾಡುವುದನ್ನು ಪಹರೆಯವರೆಲ್ಲರೂ ಕಂಡು ನನಗೆ ಹೇಳಿದರು. ಮೊದಲು ನಾನು ನಂಬಲಿಲ್ಲ. ಆದರೆ ಅವರ ಮಾತನ್ನು ಪರೀಕ್ಷಿಸಲು ನೆನ್ನೆ ರಾತ್ರಿ ನಾನೇ ಹೋಗಿದ್ದೆನು. ಮಧ್ಯರಾತ್ರಿಯು, ಕೂಡಲೇ ನಿಮ್ಮ ತಂದೆಯವರು ಅರಮನೆಯ ಎದುರಿನಲ್ಲಿ ತಿರುಗಾಡು ತ್ತಿದ್ದುದನ್ನು ಪಹರೆಯವರು ನನಗೆ ತೋರಿಸಿದರು. ನಾನು ನೋಡಿ ಅವರನ್ನು ಮಾತನಾಡಿಸಿದೆನು. ಆದರೆ ಅವರು ಮಾತಾಡಲಿಲ್ಲ.

ಸನ್ತಾಪಕ—ಮಿತ್ರಾ, ಏನು ? ನಮ್ಮ ತಂದೆಯವರೇ ?

ಸೌಮಿತ್ರಕ—ಹೌದು, ಅವರ ಹಾಗೆಯೇ ಇದ್ದರು.

ಸನ್ತಾಪಕ—ನಿಜವೋ ?

ಸೌಮಿತ್ರಕ—ಖಂಡಿತ.



# ಅಧ್ಯಾಯ 2

## ಪಿತೃಭೂತಾವಲೋಕನ

ಸನ್ತಾಪಕ—ಮಿತ್ರಾ, ಆ ಆಕಾರವು ನಮ್ಮ ತಂದೆಯು ಹಾಗೆಯೇ ಇತ್ತೆಂದು ನೀನು ಹೇಗೆ ಹೇಳುವಿ ?

ಸೌಮಿತ್ರಕ—ನಿಮ್ಮ ತಂದೆಯವರು ತಮ್ಮ ಜೀವಿತಕಾಲದಲ್ಲಿ ಧರಿಸುತ್ತಿದ್ದ ಕವಚವನ್ನೇ ಧರಿಸಿದ್ದಿತು. ಮುಖವು ಬಾಡಿಹೋಗಿ ಸ್ವಲ್ಪವಾದರೂ ಕೋಪವಿಲ್ಲದೆ ದುಃಖವನ್ನು ಸೂಚಿಸುವಂತಹದ್ದಾಗಿದ್ದಿತು.

ಸನ್ತಾಪಕ— ಅವನ್ನು ಮಾತಾಡಿಸಲಿಲ್ಲವೇ ?

ಸೌಮಿತ್ರಕ—ಸಿಪಾಯಿಗಳು ಮಾತಾಡಿಸಿದರು.

ಸನ್ತಾಪಕ—ಆಗ ಅದು ಮಾತಾಡಲಿಲ್ಲವೇ ?

ಸೌಮಿತ್ರಕ—ಮಾತಾಡಬೇಕೆಂದು ತಲೆಯನ್ನೆತ್ತಿ ಸಮೀಪಕ್ಕೆ ಬರಲು ಒಂದು ಹೆಜ್ಜೆಯನ್ನಿಡುವಷ್ಟರಲ್ಲಿ ಬೆಳಗಿನ ಝಾವವಾಗಿ ಕೋಳಿ ಕೂಗಿತು. ತಕ್ಷಣವೇ ಅದು ಹಿಂದಕ್ಕೆ ಸರಿದು ಮಾಯವಾಯಿತು.

ಸನ್ತಾಪಕ—ಮೊದಲು ಅದು ಎಷ್ಟು ಹೊತ್ತಿನಲ್ಲಿ ಕಾಣಿಸಿಕೊಳ್ಳುತ್ತದೆ ?

ಸೌಮಿತ್ರಕ—ಸರಿಯಾಗಿ ಮಧ್ಯರಾತ್ರಿಯಲ್ಲಿ.

ಸನ್ತಾಪಕನು ತನ್ನ ಮಿತ್ರನ ಮಾತುಗಳನ್ನು ಕೇಳಿ ಆಶ್ಚರ್ಯಪಟ್ಟು ಮನಸ್ಸಿನಲ್ಲಿ, ಇದು ನಮ್ಮ ತಂದೆಯ ಭೂತವಾಗಿರಬೇಕು. ಮೂರು ನಾಲ್ಕು ಮಂದಿಯೂ ನೋಡಿದೆವೆಂದು ಹೇಳುತ್ತಿದ್ದಾರೆ.

ಇದು ಸುಳ್ಳಿರಲಾರದು. ನಮ್ಮ ತಂದೆಯ ಭೂತವು ಕಾಣಿಸಿಕೊಳ್ಳ ಬೇಕಾದರೆ ಏನೋ ಒಂದು ಕಾರಣವಿದ್ದೇ ಇರಬೇಕು. ಪಹರೆಯವ ರೊಂದಿಗೆ ಮಾತಾಡದಿದ್ದರೂ ನನ್ನ ಕೂಡ ಮಾತಾಡಬಹುದೇನೋ. ಒಳ್ಳೆಯದು ಈ ದಿವಸ ರಾತ್ರಿ ನಾನು ಸ್ವತಃ ಹೋಗಿ ಕಾದಿರುವೆನು ಎಂದು ರಾತ್ರಿಯಾಗುವುದನ್ನೇ ಬಹು ಆತುರದಿಂದ ನಿರೀಕ್ಷಿಸು ತ್ತಿದ್ದನು.

ಹಿಮಂತಋತುವು. ಸೂರ್ಯನು ದಣಿದವನಾಗಿ ವಿಶ್ರಾಂತಿ ಗಾಗಿ ಬಲುಬೇಗನೆ ಪಶ್ಚಿಮಾದ್ರಿಯನ್ನು ಹೊಕ್ಕನು. ಈ ಸಮಯ ವನ್ನೇ ಬಹು ಲವಲವಿಕೆಯಿಂದ ಕಾದಿದ್ದ ದಿಗ್ವಧುಗಳು ಹಿಮವೆಂಬ ಶುಭ್ರಾಂಬರದಿಂದ ತಮ್ಮನ್ನು ಅಲಂಕರಿಸಿಕೊಳ್ಳಲು ತೊಡಗಿದರು. ಚಂದ್ರನು ಇದನ್ನು ನೋಡಿ ಸಹಿಸಲಾರದೆ ವಿಮುಖನಾಗಿ ಪ್ರಕಾಶ ಹೀನನಾದನು. ಪಕ್ಷಿಜಾಲಗಳು ತಮ್ಮ ಚಿಕ್ಕ ಪುಟ್ಟ ಮರಿಗಳನ್ನು ರೆಕ್ಕೆಗಳೊಳಗೆ ಹುದುಗಿಸಿಕೊಂಡು ಗೂಡುಗಳಲ್ಲಿ ಕೂತುಬಿಟ್ಟವು. ವರ್ತಕಮಹಾಶಯರೇ ಮೊದಲಾದ ಜನರು ತಮ್ಮ ಮನೆಗಳಿಗೆ ಹೋಗಿ ಕಂಬಳಿಗಳನ್ನು ಹೊದೆದುಕೊಂಡರೂ ತೃಪ್ತರಾಗದೆ ಅಗ್ನಿಷ್ಟಿಕೆಯ ಮುಂದೆ ಕುಳಿತು ಹಿಮವಂತನ ಪ್ರತಾಪಾಧಿಕ್ಯವನ್ನು ಸತಿಸುತರ ಎದುರಿನಲ್ಲಿ ನಡುಗುದುಟಿಗಳಿಂದ ಹೊಗಳಲು ಪ್ರಾರಂಭಿ ಸಿದರು. ಹಸಿವಿನಿಂದ ಸತ್ತರೂ ಚಿಂತೆಯಿಲ್ಲ, ಹಿಮವಂತನಿಗೆ ಮಾತ್ರ ತಮ್ಮ ಮುಖವನ್ನು ತೋರಿಸಬಾರದೆಂದು ಭಿಕ್ಷುಕರು ತಾವಿದ್ದ ಸ್ಥಳದಲ್ಲಿಯೇ ಕುಕ್ಕರಿಸಿಕೊಂಡು ಹಿಮವಂತನನ್ನು ಶಪಿಸು ತ್ತಿದ್ದರು. ಪೀಡಾಕರನಾದ ಹಿಮವಂತನಿಗೆ ಆಶ್ರಯಕೊಡಬಾರ ದೆಂದು ಜನರೆಲ್ಲರೂ ತಮ್ಮ ಮನೆಯ ಬಾಗಿಲು, ಕಿಟಕಿ, ಗವಾಕ್ಷಿ ಗಳನ್ನು ಮುಚ್ಚಿಬಿಟ್ಟರು. ಪಟ್ಟಣದ ಅಭ್ಯಂತರವೂ ನಿಶ್ಶಬ್ದ ವಾಯಿತು. ಅರಮನೆಯ ದೀಪಗಳೆಲ್ಲಾ ಆರಿಸಲ್ಪಟ್ಟು ಅರಸನ

ಶಯ್ಯಾಗೃಹದಲ್ಲಿ ಮಾತ್ರ ಒಂದು ದೀಪವು ಉರಿಯುತ್ತಿದ್ದಿತು. ಸನ್ತಾಪಕನು ತನ್ನ ಕೊಠಡಿಯಿಂದ ಹೊರಗೆ ಬಂದನು. ಸಹಿಸ ಲಾಗದ ಛಳಿ; ಮೈಯಲ್ಲೆಲ್ಲಾ ನಡುಗುಹುಟ್ಟಿತು. ಆದರೂ ಧೈರ್ಯವನ್ನಾಂತು ಮಿತ್ರನಾದ ಸೌಮಿತ್ರಕನೂ ಮತ್ತಿಬ್ಬರು ಪಹರೆಯುವರೂ ಇದ್ದ ಸ್ಥಾನಕ್ಕೆ ಬಂದು ನಿಂತನು. ಮಧ್ಯರಾತ್ರಿ ಯಾಗುತ್ತಾ ಬಂದಿತು. ಒಬ್ಬರಿಗೊಬ್ಬರು ನಿಶ್ಶಬ್ದವಾಗಿ ಮಾತಾ ಡಲುಪಕ್ರಮಿಸಿದರು. ಇದ್ದಕ್ಕಿದ್ದ ಹಾಗೆಯೇ

ಸೌಮಿತ್ರಕನು—ಯುವರಾಜಾ, ಯುವರಾಜಾ, ಅಗೋ ನೋಡು! ನಿಮ್ಮ ತಂದೆಯುವರ ಭೂತವು ಬರುತ್ತಾ ಇದೆ! ಅಗೋ ನೋಡು! ಈ ಕಡೆ ನೋಡು!

ಸನ್ತಾಪಕ—ಮಿತ್ರಾ, ಎಲ್ಲಿ? ಎಲ್ಲಿ? ಕಾಣುವುದಿಲ್ಲವಲ್ಲಾ! ಓಹೋ ಹೌದು! ಕಾಣುತ್ತದೆ! (ಎಂದು ಹೇಳಿ ತಮ್ಮ ತಂದೆಯು ಭೂತವನ್ನು ನೋಡಿದ ಕೂಡಲೇ ಅವನಿಗೆ ಆಶ್ಚರ್ಯವೂ ಭಯವೂ ಆಗಿ) ಆಹಾ! ಈ ಭೂತವು ಒಳ್ಳೆಯುದಕ್ಕಾಗಿ ಬಂದಿದೆಯೋ? ಕೆಡಕಿ ಗಾಗಿ ಬಂದಿದೆಯೋ? ಯಾರು ಬಲ್ಲರು? ಎಂದು ಭಯದಿಂದ ನಡುಗಿ ಹೋದನು. ಭೂತವಾದರೋ ಕ್ರಮೇಣ ಸಮೀಪವಾಗುತ್ತಾ ಬಂದಿತು. ಸಮೀಪವಾಗುತ್ತಿದ್ದ ಭೂತವನ್ನು ಚೆನ್ನಾಗಿ ದೃಷ್ಟಿಸಿನೋಡಿ,

ಸನ್ತಾಪಕ—ಆಹಾ! ಏನಿದು? ಈ ಭೂತವಾದರೋ ನಮ್ಮ ತಂದೆಯು ಜೀವಿತನಾಗಿರುವಾಗ ಹೇಗಿದ್ದನೋ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಹಾಗೆಯೇ ಇದೆಯಲ್ಲಾ! ಏನು ಮಾಡಲಿ! ಎಂದು ಯೋಚಿಸುತ್ತಾ ಅದನ್ನೇ ಎವೆಹಾಕದೆ ನೋಡುತ್ತಾ ನಿಂತನು. ಆ ಭೂತವು ಬಹು ದುಃಖ ತುಂಬಿದ ಮುಖವುಳ್ಳದ್ದಾಗಿ ಅವನೊಂದಿಗೆ

ಮಾತಾಡಲು ಅಪೇಕ್ಷಿಸುವಂತೆಯೇ ಕಂಡುಬಂದಿತು. ಪರಿತಾಪ ಯುಕ್ತವಾಗಿದ್ದ ಆ ತನ್ನ ತಂದೆಯ ಮುಖವನ್ನು ನೋಡಿ ಸನ್ತಾಪಕ ನಿಗೆ ಹೇಳುವುದಕ್ಕಾಗದಷ್ಟು ದುಃಖ ಬಂದು— ಹಾ ! ತಂದೆಯೇ ! ಚಂದ್ರಶೇಖರ ಭೂಪಾಲನೇ ! ಹಾ ! ತಂದೆಯೇ ! ನಿನ್ನ ಮುಖ ಕಮಲವನ್ನು ಇನ್ನೆಂದಿಗೂ ಈ ಲೋಕದಲ್ಲಿ ನೋಡುವುದಿಲ್ಲವೆಂದು ನೆನಸಿದ್ದೆನಲ್ಲಾ ! ಈ ಲೋಕದ ಸಕಲ ಕಷ್ಟದುಃಖಾದಿಗಳಿಂದ ನಿವೃತ್ತನಾಗಿ ವಿಶ್ರಾಂತಿ ಪಡೆಯಲು ನಿನ್ನನ್ನು ಭೂಸ್ಥಾಪನೆಮಾಡಿ ಬಂದಾಗ್ಯೂ ದುಃಖ ಅಪಮಾನಗಳಿಂದ ತುಂಬಿರುವ ನರಲೋಕ ವನ್ನೂ, ಹಿಮಂತಋತುವಿನ ವೈಚಿತ್ರ್ಯವನ್ನೂ ಮತ್ತೊಂದಾವರ್ತಿ ನೋಡಿಹೋಗಲು ಬಂದಿರುವೆಯಾ ಹೇಗೆ ? ನಿನ್ನ ಶವಸಂಸ್ಕಾರಾದಿ ಗಳಲ್ಲಿ ಅಲಕ್ಷ್ಯಭಾವದಿಂದ ಲೋಪವೇನಾದರೂ ಆಗಿದೆಯೇ ? ಏನು ಮಾಡಿದರೆ ನಿನ್ನ ಆತ್ಮಕ್ಕೆ ತೃಪ್ತಿಯಾದೀತು ? ತಂದೆಯೇ ! ಚಂದ್ರ ಶೇಖರರಾಜನೇ ! ದಯಮಾಡಿ ಹೇಳು. ನಿನ್ನ ಮಗನಾದ ನನಗೆ ಹೇಳದೆ ಮತ್ತ್ಯಾರಿಗೆ ಹೇಳುವಿ ? ನಾನಲ್ಲದೆ ನಿನಗೆ ಪ್ರಿಯರು ಮತ್ತ್ಯಾರಿರುವರು ? ನಿನ್ನ ಮರಣದಿಂದಲ್ಲವೇ ನಾನು ಈ ಪರಿತಾಪ ಕರವಾದ ಸ್ಥಿತಿಗೆ ಗುರಿಯಾಗಿರುವುದು ? ನೀನು ಕಾಣಿಸಿಕೊಂಡಿರುವ ಕಾರಣವೇನು ? ತಂದೆಯೇ ! ಹೇಳು ಎಂದು ಬೇಡಿಕೊಂಡನು.

ಆಗ ಪಿತೃಭೂತವು ಸನ್ತಾಪಕನಿಗೆ ತನ್ನನ್ನು ಹಿಂಬಾಲಿಸು ವಂತೆ ಸೌಜ್ಞೆಮಾಡಿತು. ಜತೆಯಲ್ಲಿದ್ದುಕೊಂಡು ಎಲ್ಲವನ್ನೂ ನೋಡುತ್ತಿದ್ದ ಸೌಮಿತ್ರಕನಿಗೂ ಇತರ ಪಹರೆಯವರಿಗೂ ಭಯ ವಾಗಿ—ಯುವರಾಜಾ ! ನೀನು ಅದರ ಹಿಂದೆ ಹೋಗಬೇಡ. ಇದು ನಿಮ್ಮ ತಂದೆಯ ವೇಷವನ್ನು ಧರಿಸಿ ಬಂದಿರುವ ಪಿಶಾಚಿಯಾಗಿರ ಬಹುದು ! ನಿನ್ನೊಬ್ಬನನ್ನೇ ದೂರ ಸ್ಥಳಕ್ಕೆ ಕರೆದುಕೊಂಡುಹೋಗಿ ಸಮುದ್ರದಲ್ಲಿ ತಳ್ಳಿಬಿಟ್ಟರೆ, ಅಥವಾ ನಿನ್ನನ್ನು ಯಾವುದಾದರೂ

ಪರ್ವತಾಗ್ರಕ್ಕೆ ಸಾಗಿಸಿಕೊಂಡುಹೋಗಿ ದೊಬ್ಬಿಬಿಟ್ಟರೆ ಮಾಡು ವುದೇನು ? ನೀನು ಖಂಡಿತ ಅದರ ಹಿಂದೆ ಹೋಗಲೇಕೂಡದು. ನಿನಗೆ ಬಹಳ ಗಂಡಾಂತರವಿದೆಯೆಂದು ನಮಗ ಚೆನ್ನಾಗಿ ತಿಳಿದಿದೆ. ಎಷ್ಟೋಮಂದಿ ಹೀಗೆ ತಮ್ಮ ಅಮೂಲ್ಯವಾದ ಪ್ರಾಣಗಳನ್ನು ಕಳೆದುಕೊಂಡಿದಾರೆ. ಬೇಡ, ಖಂಡಿತ ಹೋಗಬೇಡ, ದಯ ಮಾಡಿ ನಮ್ಮ ಮಾತುಗಳನ್ನು ಕೇಳು ಎಂಬುದಾಗಿ ನಾನಾಪರಿಯಿಂದ ಕೇಳಿಕೊಂಡರು. ಸನ್ಸ್ಥಾಪಕನು ಇವರ ಮಾತುಗಳ ಕಡೆಗೆ ಲಕ್ಷ್ಯ ಕೊಡದೆ ಮಿತ್ರರೇ, ನೀವು ನನಗಾಗಿ ಚಿಂತಿಸಬೇಡಿ. ಅದು ನನ್ನ ಪ್ರಿಯ ಜನಕನ ಭೂತವು. ನಾನು ಅದಕ್ಕೇಕೆ ಭಯಪಡಬೇಕು ? ಅದಕ್ಕೆ ನನ್ನಮೇಲೆ ಅಷ್ಟು ಪ್ರೀತಿ ಇಲ್ಲದಿದ್ದಪಕ್ಷದಲ್ಲಿ ಅದು ನನಗೆ ಹಿಂದೆ ಬರಲು ಸೌಜ್ಞೆಮಾಡುತ್ತಿದ್ದಿತೇ ? ಹಾಗೆ ಅದು ನನ್ನನ್ನು ಒಂಟಿಯಾಗಿ ಕರೆಯಲು ಏನೋ ಪ್ರಾಮುಖ್ಯವಾದ ಕಾರಣವಿರ ಬಹುದು. ಅದು ನನ್ನನ್ನು ಯಾವುದಾದರೂ ಅಪಾಯಕ್ಕೆ ಗುರಿ ಮಾಡುತ್ತದೆಂಬುವ ಶಂಕೆಯೇ ನನಗಿಲ್ಲ. ಒಂದುವೇಳೆ ಹಾಗೆ ಮಾಡಿದಾಗ್ಯೂ ನಾನು ವ್ಯಸನಪಡಲಾರೆನು. ಈ ಲೋಕದಲ್ಲಿ ನಾನು ಜೀವಿಸಿರುವಷ್ಟು ದಿನಗಳೂ ನನ್ನ ಪ್ರಿಯ ತಂದೆಯ ನೆನಪು ನನ್ನ ಹೃದಯಾಂತರ್ಯದಿಂದ ಕೀಳಲಾಗುವುದಿಲ್ಲ. ತಂದೆಯ ಅಕಾಲಮರಣದ ವಿಷಯವಾದ ಚಿಂತೆಯು ನನ್ನ ಶರೀರವನ್ನು ದಹಿಸಿಬಿಟ್ಟಿದೆ. ತಾಯಿಯ ದುಷ್ಕೃತ್ಯವು ನನ್ನ ಶರೀರಾತ್ಮಗಳೆರ ಡನ್ನೂ ಪಾತಾಳಕ್ಕೆ ತುಳಿದುಬಿಟ್ಟಿದೆ. ಇಷ್ಟಾದಮೇಲೆ ನಾನು ಲೋಕದಲ್ಲಿ ಯಾವ ಸುಖಸಂತೋಷಗಳಿಗಾಗಿ ಜೀವಿಸಿರಲಿ ? ಆ ನನ್ನ ಪಿತೃಭೂತದಿಂದ ನನ್ನ ಶರೀರಕ್ಕೆ ಏನೇ ನಷ್ಟ ಸಂಭವಿಸಿ ದಾಗ್ಯೂ ಅದರಿಂದ ನನ್ನ ಆತ್ಮಕ್ಕೆ ಎಷ್ಟುಮಾತ್ರವಾದರೂ ನಷ್ಟ ವುಂಟಾಗಲಾರದು. ದಯಮಾಡಿ ನನ್ನನ್ನು ತಡೆಯಬೇಡಿ

ಎಂದು ಹೇಳಿ ಸನ್ಸ್ಥಾಪಕನು ಭೂತದ ಹಿಂದೆಯೇ ಹೊರಟು ಹೋದನು.

ಭೂತವು ಮುಂದೆ ಮುಂದೆ, ಸನ್ಸ್ಥಾಪಕನು ಹಿಂದೆ ಹಿಂದೆ, ಹೀಗೆ ಅವರ ಸಂಭಾಷಣೆಯು ಯಾರಿಗೂ ಕೇಳಿಸದಷ್ಟು ದೂರ ಹೋದಮೇಲೆ ಭೂತವು ಸನ್ಸ್ಥಾಪಕನನ್ನು ನೋಡಿ—ಎಲೈ ಮಗನೇ! ನಾನು ನಿನ್ನ ಪಿತೃಭೂತವು. ನೀನು ಭಯಪಡಬೇಡ. ಕಂದಾ! ಬಾ! ನನ್ನ ಕನ್....ನ್....ನ್ ದಾ! ನಿನ್ನ ತಂದೆಯಾದ ನನ್ನ ಮರಣವನ್ನು ಕುರಿತು ನಾನೇನು ಹೇಳಲಿ? ನೀನು ನನ್ನ ಮರಣದ ವಿಷಯವೂ ನಿನ್ನ ತಾಯಿಯ ದುಷ್ಪ್ರವರ್ತನೆಯ ವಿಷಯವೂ ಎಷ್ಟಾಗಿ ಚಿಂತಿಸ್ತುತ್ತಿದ್ದೀಯೆಂದು ನಾನು ತಿಳಿದವನಾಗಿ ಆ ವಿಷಯದಲ್ಲಿ ನಿನ್ನ ಕೂಡ ಮಾತನಾಡುವ ಉದ್ದಿಶ್ಯವಾಗಿಯೇ ಕಳೆದ ಮೂರುನಾಲ್ಕು ದಿನಗಳಿಂದಲೂ ರಾತ್ರಿಹೊತ್ತು ಕಾಣಿಸಿಕೊಳ್ಳುತ್ತಿದ್ದೇನೆ. ನನ್ನ ಮುದ್ದು ಕಂದಾ! ಕೇಳು. ಈಗ ಎರಡು ತಿಂಗಳಹಿಂದೆ ವಾಡಿಕೆಯಂತೆ ಮಧ್ಯಾಹ್ನ ಊಟವಾದನಂತರ ನಾನು ತೋಟದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದೆನು. ಆ ಸಮಯದಲ್ಲಿ ನನಗೆ ತಮ್ಮನಾಗಿಯೂ ನಿನಗೆ ಚಿಕ್ಕಪ್ಪನಾಗಿಯೂ ಇರುವ ಭುಜಂಗಮನು ತೋಟದೊಳಕ್ಕೆ ಬಂದು ನನ್ನ ಕಿವಿಯಲ್ಲ ಮಹಾವಿಷಮಯವಾದ ಒಂದು ಮೂಲಿಕೆಯ ರಸವನ್ನು ಹಿಂಡಿದನು. ಆ ರಸವಾದರೋ ತಕ್ಷಣವೇ ನನ್ನ ಶರೀರಾಭ್ಯಂತರವನ್ನೂ ವ್ಯಾಪಿಸಿ ನನಗೆ ಜೀವಾಂತ್ಯವನ್ನುಂಟು ಮಾಡಿತು. ಮಗನೇ! ಮಗನೇ! ಆ ಸಮಯದಲ್ಲಿ ನಾನು ಪಟ್ಟ ಸಂಕಟವನ್ನು ಹೇಗೆ ವರ್ಣಿಸಲಿ? ದೇಹದ ರಕ್ತವೆಲ್ಲಾ ಕುದಿದು ಮುದ್ದೆಯಾಗಿಹೋಯಿತು. ಶರೀರದ ಮೇಲ್ಭಾಗವೆಲ್ಲಾ ಕುಷ್ಟ ಹಿಡಿದಂತಾಯಿತು. ಹೊಟ್ಟೆಯೊಳಗುಂಟಾದ ಧಗೆಯಿಂದ ಬಾಯಾರಿ ನಾಲಿಗೆಯು ಬೆಂಡಾಯಿತು. ನಾನು ಇಂತಹ ದೊಡ್ಡ ಅರಸನಾಗಿ

ದ್ದಾಗ್ಯೂ ನನ್ನ ಸಂಕಟಕಾಲದಲ್ಲಿ ನನಗೆ ಸ್ವಲ್ಪ ನೀರು ಕೊಟ್ಟು ನನ್ನ ಹೊಟ್ಟೆಯನ್ನು ತಣ್ಣಗೆ ಮಾಡುವುದಕ್ಕೆ ಯಾರೂ ಇಲ್ಲದೆ ಹೋದರು. ಅಕಟಾ! ಅಕಟಕಟಾ! ನನಗುಂಟಾದ ಸಂಕಟವನ್ನು ಹೇಳಲು ಸಹಸ್ರ ನಾಲಿಗೆಗಳಾದರೂ ಸಾಲವು. ನಾನು ಜೀವಂತ ನಾಗಿದ್ದಾಗ ಇದ್ದ ನನ್ನ ಹೆಂಡತಿ ಎಲ್ಲಿ? ಮಕ್ಕಳೆಲ್ಲಿ? ಬಂಧುಬಳಗ ವೆಲ್ಲಿ? ಮಿತ್ರರೆಲ್ಲಿ? ಚತುರಂಗಬಲವೆಲ್ಲಿ? ದ್ರವ್ಯವೆಲ್ಲಿ? ರಾಜ್ಯವೆಲ್ಲಿ? ಪ್ರಜೆಗಳೆಲ್ಲಿ? ಅಕಾಲಮೃತ್ಯುವೋ ಸಕಾಲಮೃತ್ಯುವೋ ನನ್ನ ಕೈಕಾಲುಗಳನ್ನು ಕಟ್ಟಿ ಕಳ್ಳನನ್ನು ಕಟ್ಟಿ ಕರೆದುಕೊಂಡು ಹೋಗು ವಂತೆ ನನ್ನನ್ನು ಕರೆದುಕೊಂಡು ಹೋಗುವಾಗ ನನ್ನ ಕಂದಾ! ಯಾರೂ ನನ್ನ ಸಹಾಯಕ್ಕೆ ಇಲ್ಲವಾದರು! ಯಾರೂ ನನ್ನೊಂದಿಗೆ ಬರಲಿಲ್ಲ. ಏನಿದ್ದು ಏನು ಪ್ರಯೋಜನವಾಯಿತು? ಕಡೆಗೂ ವಿಷವು ನನ್ನ ಶರೀರಾದ್ಯಂತವನ್ನೂ ವ್ಯಾಪಿಸಿ ಕಣ್ಣುಗಳು ಮೊಬ್ಬಾ ದವು, ಕಿವಿಗಳು ಮುಚ್ಚಿಹೋದವು, ನಾಲಿಗೆಯು ಸೆಳೆದು ಹೋ ಯಿತು, ಕೈಕಾಲುಗಳು ಸೆಟೆದುಹೋದವು, ಜೀವಾತ್ಮನು ಈಪರಿ ಸಂಕಟವನ್ನು ಸಹಿಸಲಾರದೆ ತಾನೂ ಹೋಗಿಬಿಟ್ಟನು. ನನ್ನ ಶರೀರವು ಮರದ ಮೊದ್ದಿನಂತೆ ನೆಲಕ್ಕುರುಳಿತು. ಹೀಗೆ ನನ್ನ ತಮ್ಮನೂ ಕೊಲೆಪಾತಕನೂ ಆದ ಭುಜಂಗಮನೇ ನನ್ನ ಸಿಂಹಾಸನ ವನ್ನೂ, ಪತ್ನಿಯನ್ನೂ, ನನ್ನ ಪ್ರಾಣವನ್ನೂ ಅಪಹರಿಸಿ ನಿರ್ದೋಷಿ ಯಂತೆ ರಾಜ್ಯವಾಳುತ್ತಿದ್ದಾನೆ. ನೀನು, ಕುಮಾರಾ! ನಿನ್ನ ತಂದೆ ಯಾದ ನನ್ನನ್ನು ಪ್ರೀತಿಸಿ ನನಗಾಗಿ ಇಷ್ಟು ದುಃಖಪಡುವುದು ನಿಜವಾಗಿದ್ದಪಕ್ಷದಲ್ಲಿ ಆ....ಆ....ಆ ಭುಜಂಗಮನಿಗೆ ಪ್ರತೀಕಾರ ವನ್ನು ಖಂಡಿತವಾಗಿ ಮಾಡುತ್ತೀಯೆ. ಇಲ್ಲದಿದ್ದರೆ ನೀನು ಕ್ಷತ್ರಿಯ ವಂಶದಲ್ಲಿ ಹುಟ್ಟಲೇ ಇಲ್ಲವೆಂದೂ, ನೀನು ನನ್ನ ಮಗನಲ್ಲವೆಂದೂ ಹೇಳಲೇಬೇಕಾಗುವುದು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿ

ಸುವುದೇ ಕ್ಷತ್ರಿಯರ ಧರ್ಮವಾಗಿದೆ. ಭುಜಂಗಮನು ನನ್ನ ತಮ್ಮನೂ ನಿನ್ನ ಚಿಕ್ಕಪ್ಪನೂ ಆದರೂ ಅವನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಲು ಹಿಂದೆಗೆಯಬೇಡ. ಅವನು ಭ್ರಾತೃದ್ರೋಹಿ, ರಾಜ ದ್ರೋಹಿ, ದೈವದ್ರೋಹಿ. ಇಂತಹವನನ್ನು ಶಿಕ್ಷಿಸುವುದರಿಂದ ನಿನಗೆ ಯಾವ ಪಾಪವೂ ಸಂಘಟಿಸುವುದಿಲ್ಲ. ಭಯಪಡಬೇಡ. ಆದರೆ ಮಗನೇ! ನಿನ್ನ ತಾ....ಯ್....ಯ್....ಯ ವಿಷಯ (ಪಿತೃ ಭೂತದ ಕಣ್ಣಿಂದ ನೀರು ಪ್ರವಾಹದೋಪಾದಿಯಲ್ಲಿ ಹರಿದು ಹೋಯಿತು. ಕಂಠಧ್ವನಿಯು ತಗ್ಗಿ ಹೋಯಿತು. ಹಾಗೂ ಮಾತು ಗಳು ತೊದಲಿದವು). ನಾನೇನು ಹೇಳಲಿ? ನಾನು ಆಕೆಯನ್ನು ಮಹಾ ಪತಿವ್ರತೆಯೆಂದು ತಿಳಿದಿದ್ದೆನು. ಆಕೆಯು ಮಹಾ ಪತಿದ್ರೋಹಿಯು. ಕಪಟಾವತಿ ಎಂಬ ತನ್ನ ಹೆಸರಿಗೆ ತಕ್ಕಂತೆಯೇ ಪ್ರವರ್ತಿಸಿದಳು. ನಾನು ಆಕೆಯನ್ನು ವಿವಾಹವಾಗುವ ದಿನ ಆಕೆಯು ನನಗೆ ಮಾಡಿದ ವಾಗ್ದಾನವನ್ನು ಮರೆತು ಭುಜಂಗಮನ ದುಷ್ಕೃತ್ಯದಲ್ಲಿ ಪಾಲುಗಾರ ಳಾದಳು. ನಾನು ಮೃತಿಹೊಂದಿ ಇನ್ನೂ ಎರಡು ತಿಂಗಳು ಪೂರ್ತಿ ಯಾಗುವದರೊಳಗಾಗಿ ಆ ಕೊಲೆಗಾರನಾದ ನನ್ನ ತಮ್ಮನನ್ನು ವಿವಾಹಮಾಡಿಕೊಂಡು ನನ್ನ ಸ್ತ್ರೀ ಪ್ರಜೆಗಳಿಗೆಲ್ಲಾ ಕೆಟ್ಟ ಮಾದರಿ ಯಾದಳು. ಆಕೆಯು ಕೂಡ ನ್ಯಾಯತಹ ಶಿಕ್ಷಾರ್ಹಳೇ ಹೌದು. ಆದರೆ ಮಗನೇ! ಆಕೆಯು ನಿನ್ನ ತಾಯಿ, ಆಕೆಗೆ ವಿರೋಧವಾಗಿ ನೀನು ಕೈ ಎತ್ತಿ ಮಾತೃದ್ರೋಹಿಯಾಗಬೇಡ. ಭಗವಂತನು ತಾನೇ ಆಕೆಯ ದುಷ್ಕೃತ್ಯಕ್ಕೆ ಪ್ರತೀಕಾರವನ್ನು ಕ್ಷಿಪ್ರದಲ್ಲಿಯೇ ಮಾಡು ವನು. ಅವಳ ಅಂತರ್ಯಸಾಕ್ಷಿಯೇ ಅವಳನ್ನು ಬಾಧೆಪಡಿಸಿ ತನಗೆ ತಾನೇ ನನ್ನಂತಹ ಮರಣವನ್ನೇ ಹೊಂದುವಳು. ಇದಕ್ಕೆ ಸಂಶಯ ವಿಲ್ಲ. ಕುಮಾರಾ, ನಾನು ನಿನಗೆ ಹೇಳಬೇಕಾದುದೆಲ್ಲವನ್ನೂ ಹೇಳಿ ದ್ದೇನೆ. ನೀನು ನಿಜವಾಗಿ ನನ್ನ ಮಗನಾಗಿ ನನ್ನನ್ನು ಪ್ರೀತಿಸುವವ

ನಾದರೆ ನನ್ನಾಜ್ಞೆಯನ್ನು ಈಡೇರಿಸುವೆನೆಂದು ವಾಗ್ದಾನಮಾಡು. ಯಾಕೆ ಮೌನವಾದಿ? ಎಂದಿತು. ಸನ್ತಾಪಕನಾದರೋ ತನ್ನ ಪಿತೃಭೂತವು ಹೇಳಿದುದನ್ನೆಲ್ಲಾ ಗಮನಿಸಿ ದುಃಖದಿಂದ—ತಂದೆ ಯೇ! ನಿನ್ನಾಜ್ಞೆಯನ್ನು ಖಂಡಿತವಾಗಿ ಶಿರಸಾವಹಿಸುವೆನು. ಈ ವಿಷಯದಲ್ಲಿ ಚಿಂತಿಸಬೇಡ. ನಿನ್ನಾಜ್ಞಾಪಾಲನೆಗಾಗಿ ಈ ನನ್ನ ಪ್ರಾಣವನ್ನೇ ಅರ್ಪಿಸಲು ಸಿದ್ಧನಾಗಿದ್ದೇನೆ ಎಂದು ವಾಗ್ದಾನ ಮಾಡಿದನು. ಕೂಡಲೇ ಪಿತೃಭೂತವು ಅದೃಶ್ಯವಾಯಿತು.

ಭೂತವು ಅದೃಶ್ಯವಾದನಂತರ ಸನ್ತಾಪಕನು ಒಬ್ಬನೇ ಉಳಿದನು. ಕಾರ್ಗತ್ತಲು. ಸಮೀಪದಲ್ಲಿ ಯಾರೂ ಇಲ್ಲ. ನಡೆದ ಸಂದರ್ಭವನ್ನು ಪುನರಾಲೋಚಿಸತೊಡಗಿದನು. ಶರೀರಾದ್ಯಂತವೂ ಕಂಪಿಸಲು ಮೊದಲಾಯಿತು. ಕಣ್ಣುಗಳೆರಡೂ ಮೊಬ್ಬಾದವು. ಮೈ ಬೆವತು ಹೋಯಿತು. ಧೈರ್ಯವೂ ಅಡಗಿತು. ನಿಲ್ಲಲು ಚೈತನ್ಯವಿಲ್ಲದೆ ನಿಂತ ಸ್ಥಳದಲ್ಲಿಯೇ ನೆಲದಮೇಲೆ ಕುಕ್ಕರಿಸಿ ಬಿದ್ದನು. ಕಡೆಗೆ ತಾನೆಲ್ಲಿರುವೆನೆಂಬ ಅರುಹು ಸಹ ಇಲ್ಲದಂತಾಯಿತು. ಇವನು ಪುನಃ ಚೇತರಿಸಿಕೊಳ್ಳಲು ಹೆಚ್ಚುಕಡಮೆ ಒಂದು ಘಂಟೆಯ ಸಮಯ ಬೇಕಾಯಿತು. ಪಿತೃಭೂತವು ಹೇಳಿದುದೆಲ್ಲವೂ ಅಕ್ಷರತಹ ಇವನ ಹೃದಯಾಂತರ್ಯದಲ್ಲಿ ಮುದ್ರಿತವಾಗಿ ಹೋಯಿತು. ಅದನ್ನು ಅಳಿಸಿಬಿಡುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಕಡೆಗೆ ಸನ್ತಾಪಕನು ತನ್ನ ಮನದಲ್ಲಿ—ಆಹಾ! ಎಂತಹ ಭಯಂಕರವಾದ ಲೋಕ! ಇಂತಹ ಭಯಂಕರವಾದ ಕಾರ್ಯಗಳನ್ನು ನೋಡಿಕೊಂಡು ಭಗವಂತನು ಏಕೆ ಸುಮ್ಮನಿರುವನೋ ತಿಳಿಯದಲ್ಲಾ! ಅಕಟಾ! ಹಾ! ಭುಜಂಗಮಾ! ನನ್ನ ಪ್ರಿಯ ತಂದೆಯು ನಿದ್ರಾವಸ್ಥೆಯಲ್ಲಿರು ವಾಗ ಆತನನ್ನು ಆ ರೀತಿ ಬಾಧೆಗೊಳಿಸಿ ವಿಷಪ್ರಯೋಗವನ್ನು ಮಾಡಿ ಕೊಲ್ಲಲು ನನ್ನ ಪಿತೃವು ನಿನಗೆ ಮಾಡಿದ ಅಪರಾಧವೇನು? ಅನ್ಯಾಯ

ವೇನು ? ಒಡಹುಟ್ಟಿದ ತಮ್ಮನೆಂದು ನಿನ್ನನ್ನು ಮಗನಾದ ನನ ಗಿಂತಲೂ ಹೆಚ್ಚಾಗಿ ಪ್ರೀತಿಸಿ ನೀನು ಬಯಸಿದ ಬಯಕೆಗಳನ್ನೆಲ್ಲಾ ನೆರವೇರಿಸಿ ನಿನ್ನಲ್ಲಿ ಅಧಿಕವಾದ ಗೌರವವನ್ನೂ ವಿಶ್ವಾಸವನ್ನೂ ಇಟ್ಟಿದ್ದನಲ್ಲಾ ! ಅಂಥಾ ನಿಜಭ್ರಾತೃವನ್ನು ಕೊಲೆಮಾಡಿ ಕೊಲೆ ಪಾತಕನೂ ವಿಶ್ವಾಸಘಾತುಕನೂ ಆದಿಯಾ ? ಇಡೀ ರಾಜ್ಯವು ಏಕಪ್ರಕಾರವಾಗಿ ನನ್ನ ತಂದೆಯ ಗುಣಕಥನವನ್ನು ಮಾಡುತ್ತಾ ಅಂತಹ ದಾತನನ್ನೂ ಅರಸನನ್ನೂ ಕಳೆದುಕೊಂಡುದಕ್ಕಾಗಿ ಇದು ವರೆಗೂ ಕೂಡ ದಿವಾರಾತ್ರಿಗಳಲ್ಲಿಯೂ ಕಣ್ಣೀರಿಡುತ್ತಿದ್ದಾರೆ. ಇಂತಹ ಕೀರ್ತಿವಂತನನ್ನು ನಿನ್ನ ಪಾಪಿಷ್ಠ ಕಣ್ಣುಗಳಲ್ಲಿ ನೋಡ ಲಾರದೆ ಅಂತ್ಯವನ್ನು ತಂದೊಡ್ಡಿದಿಯಾ ? ಛೀ, ಭ್ರಷ್ಟಾ, ಕುಲ ನಾಶಕಾ ! ಸುಡು, ನಿನ್ನ ಜನ್ಮವನ್ನು ಸುಡು. ಇಂತಹ ದುಷ್ಕಾರ್ಯ ವನ್ನು ಮಾಡಿರುವ ನೀನಾದರೂ ಎಷ್ಟುದಿನ ಬಾಳುವಿ ? ನಿನ್ನ ಮನ ಸ್ಸಾಕ್ಷಿಯ ಪೀಡನೆಯನ್ನು ಹೇಗೆ ಸಹಿಸುವಿ ? ನಿನ್ನ ದುಷ್ಕೃತ್ಯದಲ್ಲಿ ನನ್ನ ತಾಯಿಯು ಸಹ ಭಾಗಿಯಾಗುವಂತೆ ಮಾಡಿದಿ. ಆಕೆಯ ಪಾತಿವ್ರತ್ಯಕ್ಕೆ ಹಾನಿಯನ್ನುಂಟುಮಾಡಿದಿ. ಇರಲಿ, ನೀನು ಮಾಡಿದುದಕ್ಕೆಲ್ಲಾ ತಕ್ಕ ಪ್ರಾಯಶ್ಚಿತವನ್ನು ಹೊಂದೇ ಹೊಂದುವಿ ಎಂದು ಅಂದುಕೊಳ್ಳುತ್ತಾ ಅರಮನೆಯ ಕಡೆಗೆ ಹೊರಟನು.

ಇತ್ತ ಅರಮನೆಯ ಮುಂದುಗಡೆ ಪಹರೆ ಕೊಡುತ್ತಿದ್ದ ಸಿಪಾಯಿಗಳು—ಯುವರಾಜನಾದ ಸನ್ತಾಪಕನು ಹೋಗಿ ಬಹಳ ಹೊತ್ತಾಯಿತು. ಇನ್ನೂ ಬರಲಿಲ್ಲವಲ್ಲಾ ! ಭೂತವು ಎಲ್ಲಿಗೆ ಕರೆದೊಯ್ದು ಅವನನ್ನು ಏನು ಮಾಡಿಬಿಟ್ಟಿತೋ ತಿಳಿಯಲಿಲ್ಲ. ಹೋಗಬೇಡವೆಂದು ಎಷ್ಟು ಬಗೆಯಿಂದ ಹೇಳಿದಾಗ್ಯೂ ಆತನು ಕೇಳದೆ ಹೋದನು. ಏನು ಮಾಡೋಣ ? ಎಂದು ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಿರುವುದನ್ನು ಸೌಮಿತ್ರಕನು ಕೇಳಿ ಸಿಪಾಯಿಗಳೇ

ಹೌದು ; ಯುವರಾಜನು ಹೋಗಿ ಬಹಳ ಹೊತ್ತಾಯಿತು. ಯಾವ ಕಾರಣದಿಂದಲೋ ಆತನು ಇನ್ನೂ ಬರಲಿಲ್ಲ. ಬೆಳಗಾಗುತ್ತಾ ಬಂದಿತು. ನೀವು ಇಲ್ಲೇ ಇರಿ. ನಾನು ಹೋಗಿ ನೋಡಿಕೊಂಡು ಬರುತ್ತೇನೆ ಎಂದು ಹೇಳಿ ಸ್ವಲ್ಪ ದೂರ ಹೋಗುವುದರೊಳಗಾಗಿಯೇ ಯುವರಾಜನು ಎದುರಿಗೆ ಬಂದು (ಕತ್ತಲಾಗಿದ್ದುದರಿಂದ)—ಅಲ್ಲಿ ಹೋಗುವುದು ಯಾರು ? ಎಂದು ಕೇಳಿದನು.

ಸೌಮಿತ್ರಕನು (ಯುವರಾಜನ ಕಂಠಧ್ವನಿಯೆಂದು ತಿಳಿದವನಾಗಿ)—ಯುವರಾಜಾ, ನಾನು ಸೌಮಿತ್ರಕ.

ಸನ್ತಾಪಕ—ಮಿತ್ರಾ, ಎಲ್ಲಿಗೆ ಹೋಗುತ್ತೀಯೆ ?

ಸೌಮಿತ್ರಕ—ನಿನ್ನನ್ನು ಹುಡುಕಿಕೊಂಡು ಬರಬೇಕೆಂದು.

ಸನ್ತಾಪಕ—ಯಾಕೆ ಹುಡುಕುವುದು ? ನಾನೇ ಬರುತ್ತಿದ್ದೆನಲ್ಲಾ.

ಸೌಮಿತ್ರಕ—ಹೌದು ಬರುತ್ತಿದ್ದಿ. ಆದರೆ ಬಹಳ ತಡವಾದುದರಿಂದ ನಾವು ಗಾಬರಿಪಡಲು ಕಾರಣವಾಯಿತು.

ಸನ್ತಾಪಕ—ಯಾಕೆ ಗಾಬರಿ ?

ಸೌಮಿತ್ರಕ—ಭೂತವು ನಿನ್ನನ್ನು ಏನು ಮಾಡಿತೋ ಎಂದು.

ಸನ್ತಾಪಕ—ಮಿತ್ರನೇ, ನನ್ನ ಪಿತೃಭೂತದಿಂದ ನನಗೆ ಹಾನಿಯಾಗುವುದುಂಟೋ ?

ಸೌಮಿತ್ರಕ—ಏನೋ ? ಯಾರು ಬಲ್ಲರು ? ಯಾವ ಸಮಯವು ಹೇಗಿರುವುದೋ ?

ಸನ್ತಾಪಕ—ಮನುಷ್ಯನಾಗಿ ಜನ್ಮವೆತ್ತಿದಮೇಲೆ ಯಾವ ಸಮಯ ಹೇಗಿದ್ದಾಗ್ಯೂ ಮಿತ್ರಾ ! ಆ ಸಮಯದಲ್ಲಿ ಸಂಭವಿಸಿದಂಥಾದ್ದು ಒಳ್ಳೇದಾಗಲೀ, ಕೆಟ್ಟದ್ದಾಗಲೀ, ಸುಖವಾಗಲೀ,

ದುಃಖವಾಗಲೀ ಅನುಭವಿಸಲೇ ಬೇಕು. ಯಾರಿಗೂ ಅದು ತಪ್ಪಿದ್ದಲ್ಲ. ನೀನು ನನ್ನ ವಿಷಯ ಗಾಬರಿಪಡುವುದೇಕೆ? ನಾನು ನನ್ನ ವಿಷಯ ಭಯಪಡುವುದೇಕೆ? ಹಾಗೆ ಭಯಪಟ್ಟರೂ ಅದರಿಂದುಂಟಾಗುವ ಪ್ರಯೋಜನ ತಾನೇ ಏನು? ಅಂತಹ ನನ್ನ ಪ್ರಿಯ ತಂದೆಯು ದ್ರೋಹಿಯಾದ ಭುಜಂಗನಿಂದ ಅಕಸ್ಮಾತ್ತಾಗಿ ಸಂಭವಿಸಿದು ದನ್ನು ಅನುಭವಿಸಿ ತನ್ನಸುವನ್ನೇ ನೀಗಲಿಲ್ಲವೇ?

ಸೌಮಿತ್ರಕ—ಮಿತ್ರಾ, ಮಿತ್ರಾ, ಏನು ಹೇಳಿದಿ?

ಸನ್ತಾಪಕ—ದ್ರೋಹಿಯಾದ ಭುಜಂಗನಿಂದ ನನ್ನ ತಂದೆಯು ಮೃತನಾದನು.

ಸೌಮಿತ್ರಕ—ಅದು ಹೇಗೆ ನಿನಗೆ ತಿಳಿಯಿತು?

ಸನ್ತಾಪಕ—ನನ್ನ ಪಿತೃಭೂತವೇ ಆ ಸಂಗತಿಯನ್ನು ಪರಿಷ್ಕಾರವಾಗಿ ಹೇಳಿತು ಎಂದು ಪಿತೃಭೂತವು ತನಗೆ ಹೇಳಿದ ಯಾವತ್ತೂ ಸಂಗತಿಗಳನ್ನು ವಿವರಿಸಿ ಮಿತ್ರಾ! ಆ ನನ್ನ ಪಿತೃ ಭೂತವು ನನ್ನ ತಂದೆಯು ಮರಣಕಾಲದಲ್ಲಿ ಅನುಭವಿಸಿದ ಕಷ್ಟ ಯಾತನೆಗಳನ್ನು ಹೇಳುತ್ತಿರುವಾಗ ನನ್ನಲ್ಲುಂಟಾದ ಸಂಕಟವನ್ನು ಹೇಳಲು ಸಹಸ್ರ ನಾಲಗೆಗಳಾದರೂ ಸಾಲವು. ನನ್ನ ತಂದೆಯ ಕಿವಿಗಳಲ್ಲಿ ಆ ವಿಷವನ್ನು ಹಿಂಡುವಾಗ ಆ ದುರುಳನಾದ ಭುಜಂಗ ಮನ ಕೈಗಳೆರಡೂ ಕತ್ತರಿಸಿಬೀಳಲಿಲ್ಲವಲ್ಲಾ! ಕಣ್ಣುಗಳು ಕಳಚಿ ಬೀಳಲಿಲ್ಲವಲ್ಲಾ! ಪುಣ್ಯಶೀಲನೂ, ಸದ್ಗುಣಮಣಿಯೂ ಪ್ರಜಾ ವತ್ಸಲನೂ ಆದ ನನ್ನ ತಂದೆಯು ಕ್ಷತ್ರಿಯರಿಗೆ ಸಹಜವಾದ ರಣ ರಂಗದಲ್ಲಿ ಯುದ್ಧಮಾಡಿ ಶತ್ರುವಿನ ಖಡ್ಗಕ್ಕೆ ತುತ್ತಾಗಿ ದೇಹವನ್ನು ಬಿಟ್ಟುಹೊರಟು ಪರಲೋಕವಾಸಿಯಾಗಿದ್ದರೆ ಇಂತಹ ದುಃಖ ಪರಂಪರೆಯನ್ನು ನಾನೇಕೆ ಅನುಭವಿಸಬೇಕಾಗಿದ್ದಿತು? ಮಿತ್ರಾ, ಸಾಕು. ಲೋಕದ ಸುಖವೂ ಸಂಪತ್ತೂ ಸಾಕು. ನನ್ನ ಪಿತೃ

ಭೂತಕ್ಕೆ ಮನಃಪೂರ್ವಕವಾಗಿ ನಾನು ಮಾಡಿರುವ ವಾಗ್ದಾನವನ್ನು ನೆರವೇರಿಸುವುದೇ ನನ್ನ ಈಗಿನ ಕರ್ತವ್ಯವಾಗಿದೆ. ಇದಕ್ಕಾಗಿ ನನ್ನ ಆಹಾರವಿಹಾರಗಳನ್ನೂ, ವಿದ್ಯಾವಿನೋದಗಳನ್ನೂ, ಯೌವ್ವನ ಪರಾಕ್ರಮಗಳನ್ನೂ, ಕಡೆಗೆ ಈ ನನ್ನ ದೇಹವನ್ನೇ ಅರ್ಪಿಸಲು ಸಿದ್ಧಮನಸ್ಕನಾಗಿದೇನೆ. ಹ್ಯಾಗೂ ನನ್ನ ಪಿತೃವನ್ನು ಕೊಲೆ ಮಾಡಿದ ಆ—ಆ ಭುಜಂಗನಿಗೆ ಪ್ರತೀಕಾರವನ್ನು ಮಾಡಿ ನನ್ನ ಪಿತೃ ಭೂತಕ್ಕೆ ಮಾಡಿದ ವಾಗ್ದಾನವನ್ನು ಪೂರ್ತಿಮಾಡಿ ಅದಕ್ಕೆ ತೃಪ್ತಿಯನ್ನುಂಟುಮಾಡುವೆನು (ಎಂದು ದೃಢಪ್ರತಿಜ್ಞೆಯನ್ನು ಮಾಡಿ) —ಮಿತ್ರಾ, ಸೌಮಿತ್ರಕಾ. ನಾನು ಹೇಳಿದ ಸಂಗತಿಗಳನ್ನಾಗಲೀ ಭೂತವು ಕಾಣಿಸಿಕೊಂಡುದನ್ನಾಗಲೀ ಯಾರಿಗೂ ಹೇಳಬೇಡ.

ಸೌಮಿತ್ರಕ—ಯುವರಾಜಾ, ನಾನು ನಿನ್ನ ಪ್ರಾಣಾಪ್ತ ನಲ್ಲವೇ ? ನನ್ನನ್ನು ನಂಬು ನಾನು ಎಂದಿಗೂ ಈ ಸಂಗತಿಯನ್ನು ಯಾರಿಗೂ ಹೇಳುವುದಿಲ್ಲ. ಸತ್ಯಕ್ಕೆ ನಡೆ. ಬೆಳಗಾಯಿತು. ಯಾರಾದರೂ ನೋಡಿಯಾರು. ಹೋಗೋಣ ಎಂದು ಸನ್ತಾಪಕ ನನ್ನು ಅರಮನೆಗೆ ತಂದುಬಿಟ್ಟು ತನ್ನ ಮನೆಗೆ ಹೊರಟುಹೋದನು.

ಸನ್ತಾಪಕನಾದರೋ ತನ್ನ ಶಯ್ಯಾಗೃಹದಲ್ಲಿ ಒಂಟಿಯಾಗಿ ಕೂತುಕೊಂಡು ತೆರೆದಿರುವ ಕಿಟಕಿಯಿಂದ ತೋಟವನ್ನೂ ತಂದೆಯು ಮೃತಿಹೊಂದಿದ ಸ್ಥಳವನ್ನೂ ವಕ್ರದೃಷ್ಟಿಯಿಂದ ನೋಡುತ್ತಾ— ಹಾ ! ತಂದೆಯೇ ! ನಿನ್ನನ್ನು ಅಕಾಲಮರಣಕ್ಕೆ ತುತ್ತಾಗಿ ಮಾಡಿದ ದುಷ್ಟ ಭುಜಂಗಮನನ್ನು ಕೊಂದು, ನಿನಗೆ ಕೊಟ್ಟ ವಾಗ್ದಾನವನ್ನು ಪೂರೈಸಿ ನನ್ನ ಪ್ರತಿಜ್ಞೆಯನ್ನು ಸಾರ್ಥಕಪಡಿಸಿಕೊಳ್ಳಲು ಯಾವ ಉಪಾಯವನ್ನು ಹುಡುಕಲಿ ? ಹಾ ! ತಂದೆಯೇ ಪ್ರಿಯ ಜನಕಾ ! ಜನಕಾ ! ಎಂದು ರೋಧಿಸುತ್ತಾ ಮೂರ್ಛಿತನಾದನು.

---

# ಅಧ್ಯಾಯ 3

---

## ಕಾರ್ಯಸಾಧನೋಪಾಯ

ತಾಯಿಯು ಅಳುತ್ತಿರುವ ತನ್ನ ಕಂದನ ತಲೆ ಮೈಗಳನ್ನು ಸವರಿ ಸಮಾಧಾನಪಡಿಸುವಂತೆ ವಿಚಾರತರಂಗಗಳಲ್ಲಿ ಮಗ್ನನಾಗಿ ಚಿಂತಾಬ್ಧಿಯಲ್ಲಿ ಮುಳುಗಿ ಮೂರ್ಛಿತನಾಗಿ ಬಿದ್ದಿದ್ದ ಯುವರಾಜನಾದ ಸಸ್ತ್ರಾಪಕನನ್ನು ಮೃದುಹೃದಯನೂ ಶಾಂತಮೂರ್ತಿಯೂ ಆದ ಮಾರುತನು ನೋಡಿ ಕನಿಕರಿಸಿ ತನ್ನ ಶೈತ್ಯಾಸ್ತ್ರಗಳಿಂದ ಮೃದುವು ಶರೀರವನ್ನಾಘ್ರಾಣಿಸಿ ಎಚ್ಚರಗೊಳಿಸಿದನು. ಮನುಷ್ಯರನ್ನೂ ಮೃಗಪಕ್ಷಿಗಳನ್ನೂ ತನ್ನ ಕ್ರೌರ್ಯದಿಂದ ಕಳೆದ ಇರುಳೆಲ್ಲಾ ಬಾಧೆಗೊಳಿಸಿದ ಹಿಮಂತನು ದಣಿದು ವಿಶ್ರಾಂತಿಗೊಳ್ಳಲು ಸ್ಥಳವನ್ನು ಹುಡುಕುತ್ತಿರುವಷ್ಟರಲ್ಲಿ ದಿನಕರನು ಪೂರ್ವಾದ್ರಿಯಲ್ಲಿ ಉದಯಿಸಿ ತನ್ನ ಕಿರಣಗಳಿಂದ ಲೋಕವನ್ನು ಆನಂದಾಬ್ಧಿಯಲ್ಲಿ ಮುಳುಗಿಸಿದನು. ಹಿಮಂತನಿಗ ಹೆದರಿ ತಮ್ಮ ವಾಸಸ್ಥಳಗಳಲ್ಲಿ ಅವಿತುಕೊಂಡಿದ್ದ ಮೃಗಪಕ್ಷಿಗಳು ಒಂದೊಂದಾಗಿ ಹೊರಗ ಬರಲಾರಂಭಿಸಿದವು. ಜನರು ತಮ್ಮ ದಿನಚರಿಯ ಕೆಲಸಕಾರ್ಯಗಳನ್ನು ಪ್ರಾರಂಭಿಸಿದರು.

ಇತ್ತ ಮಾರುತನ ಉಪಚಾರದಿಂದ ಚೇತರಿಸಿಕೊಂಡಿದ್ದ ಸಸ್ತ್ರಾಪಕನು ಎದ್ದು ಪ್ರಾತಃಕರ್ಮಗಳನ್ನು ನಿರ್ಲಕ್ಷ್ಯದಿಂದ ನೆರವೇರಿಸಿಕೊಂಡು ಅರಮನೆಯ ಉಪವನಕ್ಕೆ ಬಂದು ತನ್ನ ಪ್ರಿಯ ಜನಕನು ಯಾವ ಶಿಲಾಸನದ ಮೇಲೆ ಶ್ರಮಪಟ್ಟು ಮೃತಿಹೊಂದಿ

ದನೋ ಅದೇ ಆಸನದ ಮೇಲೆ ಕುಳಿತುಕೊಳ್ಳಲು ಕೈಯೂರಿದನು. ಆ ಶಿಲೆಗೆ ಕೈತಾಗಿದ ತಕ್ಷಣವೇ ಕಣ್ಣಿನ ಜಲಬುಗ್ಗೆಯು ಒಡೆದು ಹೋಯಿತೋ ಎಂಬಂತೆ ನೀರು ಪ್ರವಾಹರೂಪದಿಂದ ಹರಿದು ಹೋಯಿತು. ಪಿತೃವಿಯೋಗದಿಂದ ನಿದ್ರಾಹಾರಗಳನ್ನು ತೊರೆದು ಮೊದಲೇ ಕೇವಲ ಕೃಶನಾಗಿದ್ದ ಇವನಿಗೆ ಬಹಳ ಹೊತ್ತು ನಿಲ್ಲಲೂ ತ್ರಾಣವಿಲ್ಲದೆ ಆಸನದ ಮೇಲೆ ಕುಳಿತುಕೊಂಡು-- ಅಯ್ಯೋ! ನನ್ನ ಪ್ರಿಯ ತಂದೆಯು ಈ ಕಲ್ಲಿನಮೇಲೆ ಮಲಗಿ ಎಷ್ಟು ಶ್ರಮಪಟ್ಟಿರಬಹುದು! ಆತನು ಪ್ರಾಣವನ್ನು ಹೇಗೆ ನೀಗಿರ ಬಹುದು! ನಿಜಭ್ರಾತೃವಿನ ಕಿವಿಗಳಲ್ಲಿ ವಿಷವನ್ನು ಪ್ರಯೋಗಿಸಲು ದುಷ್ಟನಾದ ನಮ್ಮ ಚಿಕ್ಕಪ್ಪನಿಗೆ ಹೇಗೆ ಮನಸ್ಸು ಒಡಂಬಟ್ಟಿರ ಬಹುದು! ಹೊನ್ನು ಹೆಣ್ಣು ಮಣ್ಣು ಎಂಬಿವುಗಳ ಮಾಯಾಪಾಶ ದಲ್ಲಿ ಸಿಲುಕಿದ ಮಾನವನು ಎಂತಹ ಹೇಯಕೃತ್ಯವನ್ನಾಗಲಿ ಮಾಡಲು ಹಿಂಜರಿಯನೆಂಬುವುದು ನನ್ನ ತಂದೆಯ ಮರಣದಿಂದ ಸಾದೃಶ್ಯವಾಯಿತೇ! ಹಾ! ಲೋಕವೇ! ನೀನೇ ಸ್ಥಿರವೆಂದು ನಂಬಿರುವ ಮರ್ತ್ಯರನ್ನು ಅಸ್ಥಿರವಾದ ಸುಖ ಭೋಗಗಳಿಂದ ಮರುಳುಗೊಳಿಸಿ ಕಡೆಗೆ ಅವರನ್ನು ನರಕಾಗ್ನಿಯಲ್ಲಿ ದೊಬ್ಬಿ ದೂರ ವಾಗುವುದೇ ನಿನ್ನ ಧರ್ಮವೇ? ಕೆಂಪಾಗಿ ಕಾಣುವ ದೀಪವನ್ನು ಹಣ್ಣೆಂದು ಭ್ರಮಿಸಿ ಕಡೆಗೆ ಅದರಲ್ಲಿಯೇ ಸುಟ್ಟು ಭಸ್ಮವಾಗುವ ಹುಳುವಿನಂತೆ ಪಾಪಾಂಧರಾದ ಮಾನವರು ನಿನ್ನ ಥಳಕಿಗೆ ಬೆರಗಾಗಿ ಕಡೆಗೆ ಯಮಗೂಂಡದಲ್ಲಿ ಅಯ್ಯೋ! ಅಪ್ಪಾ! ಕುಯ್ಯೋ! ಮರ್ರೋ! ಹಾ! ಅಹಹಾ! ಎಂದು ಅಗ್ನಿಬಾಧೆಯನ್ನು ತಡೆಯಲಾರದೆ ಅಗ್ನಿ ಕುಂಡದಲ್ಲಿ ಮುಳುಗುತ್ತಾ ತೇಲುತ್ತಾ ನರಳಾಡುತ್ತಿರುವಾಗ ಮರೆ ಯಲ್ಲಿ ನಿಂತು ಗಹಗಹಿಸಿ ನಗುತ್ತಿರಬೇಕೆಂದಿರುವಿಯಾ! ಛೀ! ಲೋಕವೇ! ಭ್ರಷ್ಟಲೋಕವೇ! ಅಲ್ಪಕಾಲದ ಭೋಗಭಾಗ್ಯಕ್ಕಾಗಿ

ಜನರು ನಿನಗೆ ತಮ್ಮ ತನು ಮನ ಧನಗಳನ್ನು ಕೊಟ್ಟು ಏಕೆ ನಿತ್ಯ ದಂಡನೆಗೆ ಗುರಿಯಾಗುತ್ತಾರೆಯೋ ತಿಳಿಯುದಲ್ಲಾ !

ಇದುವರೆಗೂ ನನ್ನ ತಂದೆಯ ಮರಣದ ಯಥಾರ್ಥತ್ವವು ನನಗೆ ತಿಳಿದಿರಲಿಲ್ಲ. ಈಗ ತಿಳಿಯಿತು. ಈಗ ಕಾರ್ಯವನ್ನು ಉಪಾಯಾಂತರದಿಂದ ಸಾಧಿಸಬೇಕೇ ಹೊರತು ಆತುರಪಡುವುದರಿಂದ ಯಾವ ಪ್ರಯೋಜನವೂ ಆಗದು. ನನ್ನ ತಾಯಿಯಾದ ಕಪಟಾವತಿಯೂ, ಚಿಕ್ಕಪ್ಪನಾದ ಭುಜಂಗಮನೂ ನನ್ನ ವಿಷಯದಲ್ಲಿ ಅಸಮಾಧಾನವುಳ್ಳವರಾಗಿಯೇ ಇದ್ದಾರೆ. ನಾನು ನನ್ನ ತಂದೆಯ ಮೇಲಣ ಚಿಂತೆಯಲ್ಲಿ ಮುಳುಗಿ ಆಹಾರವಿಹಾರಗಳನ್ನು ತೊರೆದು ಈ ರೀತಿ ದುಃಖಿಸುತ್ತಿರುವುದು ಅವರಿಗೆ ಸ್ವಲ್ಪವಾದರೂ ಮನಸ್ಸೇ ಇಲ್ಲ. ಅವರು ನನ್ನ ಕೂಡ ಎಷ್ಟೇ ಮೃದುಮಧುರವಾಗಿ ಮಾತ ನಾಡಿದರೂ ನನ್ನಮೇಲೆ ಅವರಿಗಿರುವ ದ್ವೇಷವೂ ನನಗೆ ಅವರ ಮೇಲಿರುವ ದ್ವೇಷವೂ ಎಂದಿಗೂ ನಿವಾರಣೆಯಾಗಲು ಸಾಧ್ಯವೇ ಇಲ್ಲ. ನೆನ್ನೇ ರಾತ್ರಿಯ ಸಮಾಚಾರವು ಅವರಿಗೇನಾದರೂ ತಿಳಿದು ನನ್ನ ತಂದೆಯ ಮರಣದ ನಿಜವೃತ್ತಾಂತವನ್ನು ಪಿತೃ ಭೂತದ ಮೂಲಕ ತಿಳಿದುಕೊಂಡಿದ್ದೇನೆಂದು ಯಾವ ವಿಧದಿಂದ ಲಾದರೂ ಅವರಿಗೆ ಸೂಚನೆಯುಂಟಾದರೆ ನನ್ನಮೇಲಣ ದ್ವೇಷವು ದ್ವಿಗುಣವಾಗಿ ನನಗೆ ಉಳಿಗಾಲವಿಲ್ಲದಂತಾಗುತ್ತದೆ. ಆಗ ನಾನು ಪಿತೃಭೂತಕ್ಕೆ ಮಾಡಿದ ವಾಗ್ದಾನವನ್ನು ನೆರವೇರಿಸದೆ ವಚನ ಭ್ರಷ್ಟನಾಗಿ ಸಾಯಬೇಕು. ಏನು ಮಾಡಲಿ ? ಎಂದು ಸ್ವಲ್ಪ ಹೊತ್ತಿನವರೆಗೆ ಯೋಚಿಸಿದವನಾಗಿ ತರುವಾಯ—ಹೌದು, ಇದೇ ತಕ್ಕ ಉಪಾಯ. ನಾನು ನನ್ನ ಪಿತೃಭೂತಕ್ಕೆ ಕೊಟ್ಟ ಭಾಷೆ ಯನ್ನು ಈಡೇರಿಸುವ ನಿಮಿತ್ತ ಅವನನ್ನು—ಆ ಭುಜಂಗಮನನ್ನು

—ನನ್ನ ಖಡ್ಗಕ್ಕೆ ಆಹುತಿಯಾಗಿ ಮಾಡುವವರಿಗೂ ನಾನು ನಿಜವಾದ ಹುಚ್ಚನಂತೆ ನಟಿಸಬೇಕು. ಆಗ ನನ್ನಿಂದ ಏನಾದರೂ ಅಪಾಯ ವಾಗುವುದೆಂಬ ಸಂಶಯ ಅವರಿಗೆ ಇರುವುದಿಲ್ಲ. ಇದೇ ಸರಿಯಾದ ಉಪಾಯವೆಂದು ಆಲೋಚಿಸಿ ಆ ನಿಮಿಷದಿಂದ ಸರಿಯಾದ ಹುಚ್ಚ ನಂತೆಯೇ ನಟಿಸಲು ಆರಂಭಿಸಿದನು.

ರಾಜಕುಮಾರನು ಆ ಬಳಿಕ ತೋಟದೊಳಗಿನಿಂದ ತನ್ನ ಕೊಠಡಿಯೊಳಕ್ಕೆ ಹೋಗಿ ತಾನು ಧರಿಸಿದ್ದ ಅಮೂಲ್ಯವಾದ ವಸ್ತ್ರ ಗಳನ್ನೆಲ್ಲಾ ಹರಿದುಹಾಕಿ ಹಳೆಯ ಚಿಂದೀ ಬಟ್ಟೆಗಳನ್ನು ಹಾಕಿಕೊಂಡನು. ಅವನ ನಡೆನುಡಿಗಳೆಲ್ಲವೂ ಸಂಪೂರ್ಣ ವಾಗಿ ರೂಪಾಂತರ ಹೊಂದಿದವು. ಎಂತಹ ಬುದ್ಧಿವಂತರಿಗಾ ದರೂ ಇವನ ಮರ್ಮವನ್ನು ಕಂಡುಹಿಡಿಯಲು ಸಾಧ್ಯವಿಲ್ಲದೆ ಹೋಯಿತು. ನೋಡಿದವರ್‍ಯಾರೇ ಆಗಲಿ ಇವನು ನಿಜವಾಗಿ ಹುಚ್ಚನೇ ಹೌದೆಂದು ನಿರ್ಧರಿಸುತ್ತಿದ್ದರು. ಪ್ರಜೆಗಳಲ್ಲಿಯೂ ಅಧಿ ಕಾರಿಗಳಲ್ಲಿಯೂ ಅನೇಕರು ತಮ್ಮ ಯುವರಾಜನಿಗೆ ಪ್ರಾಪ್ತವಾದ ದುರ್ಗತಿಯನ್ನು ನೋಡಿ ಅನೇಕವಿಧವಾಗಿ ದುಃಖಿಸುವವರಾದರು. ಯುವರಾಜನಿಗೆ ಹುಚ್ಚು ಹಿಡಿದಿದೆ ಎಂಬ ಸಮಾಚಾರವು ಇಡೀ ರಾಜ್ಯದಲ್ಲೆಲ್ಲಾ ಹಬ್ಬಿಬಿಟ್ಟಿತು. ಕಟ್ಟಕಡೆಗೆ ಅರಸನಿಗೂ ಮಹಾ ರಾಣಿಗೂ ಈ ಸಮಾಚಾರ ತಿಳಿಯಬಂದು ಯುವರಾಜನಾದ ಸನ್ತಾ ಪಕನು ಕಳೆದ ಎರಡು ತಿಂಗಳಿಂದ ಆಹಾರವಿಹಾರಗಳನ್ನು ತೊರೆದು ಏಕಾಂಗಿಯಾಗಿ ಒಂದು ಮೂಲೆಯಲ್ಲಿ ಕುಳಿತು ದುಃಖಿಸುತ್ತಿದ್ದುದು ಅವನ ಬುದ್ಧಿ ಸ್ವಾಧೀನವಿಲ್ಲದ್ದರಿಂದಲೇ ಹೊರತು ತಂದೆಯು ತೀರಿ ಹೋದುದಕ್ಕಲ್ಲವೆಂದು ಸಂಪೂರ್ಣವಾಗಿ ತಿಳಿದುಕೊಂಡರು.

ಅತ್ತ ಸನ್ತಾಪಕನಿಗೆ ಪಿತೃಭೂತವು ಕಾಣಿಸಿಕೊಂಡುದು ದಾಗಲಿ, ಇವನ ಅಂತರ್ಯ ಮರ್ಮವಾಗಲಿ ತಿಳಿಯಲಾರದೆ

ತಾಯಿಯಾದ ಕಪಟಾವತಿಯು ತನ್ನ ದ್ವಿತೀಯ ಪತಿಯಾದ ಭುಜಂಗಮನನ್ನು ಕಂಡು— ಎಲೈ ಪ್ರಿಯನೇ, ನನ್ನ ಕಂದನು ತನ್ನ ತಂದೆಯ ಮರಣಕ್ಕಾಗಿ ದುಃಖಿಸುತ್ತಾ ಅನ್ನಪಾನಗಳನ್ನು ಬಿಟ್ಟಿರುತ್ತಾನೆಂಬುವುದು ಶುದ್ಧ ಸುಳ್ಳು. ನನ್ನ ಕಂದನು ಯೌವನಸ್ಥನು, ರೂಪವಂತನು, ವಿದ್ಯಾವಂತನು, ಪರಾಕ್ರಮಿಯು, ಹಾಗೂ ಗುಣಾಢ್ಯನು. ತಾಯಿಯಾದ ನಾನೂ ಅವನಿಗೆ ತಂದೆಯ ಸ್ಥಾನದಲ್ಲಿರುವ ನೀನೂ ಮಗನ ವಿಷಯ ಚಿಂತಿಸದಿದ್ದರೆ ಮತ್ತೊಬ್ಬರು ಚಿಂತಿಸ್ಯಾರೇ ? ಅವನು ಪ್ರಾಪ್ತವಯಸ್ಕನಾಗಿರುವುದರಿಂದ ಅನುರೂಪಳಾದ ಕನ್ಯೆಯನ್ನು ಹುಡುಕಿ ಸಾಧ್ಯವಾದಷ್ಟು ಬೇಗನೆ ಅವನಿಗೆ ವಿವಾಹಮಾಡಬೇಕು. ಈ ತನ್ನ ಅಂತರ್ಯವನ್ನು ಹೇಳುವುದಕ್ಕೆ ನಾಚಿಕೆಯುಳ್ಳವನಾಗಿ ಅವನು ವಿವಾಹದ ವಿಷಯವನ್ನು ಕುರಿತು ಅಹೋರಾತ್ರಿಗಳಲ್ಲಿ ಚಿಂತಿಸಿ ಚಿಂತಿಸಿ ಕಡೆಗೆ ಈ ಸ್ಥಿತಿಗೆ ಬಂದಿದ್ದಾನೆ. ನನ್ನ ಮಾತನ್ನು ಅಂಗೀಕರಿಸಿ ಬೇಗನೆ ಅವನಿಗೆ ವಿವಾಹಮಾಡಿದರೆ ಈ ಹುಚ್ಚು ನಿರ್ನಾಮವಾಗುತ್ತದೆ. ನನ್ನ ಮಾತನ್ನು ನಂಬು. ಏನೋ ಹೇಳಿದಳೆಂದು ನಿರ್ಲಕ್ಷ್ಯಮಾಡಿದ್ದೇಯಾದರೆ ಚಿಂತೆಯೇ ವಿಷವಾಗಿ ಪರಿಣಮಿಸಿ ನನ್ನ ಮುದ್ದುಕಂದನ ಪ್ರಾಣಕ್ಕೆ ಹಾನಿಯನ್ನುಂಟುಮಾಡೀತು ಎಂದು ಹೇಳಿದಳು.

ಇದನ್ನು ಕೇಳಿದ ಅರಸನಾದ ಭುಜಂಗಮನು—ಪ್ರಿಯೇ! ನಿನ್ನ ಮಗನು ಈ ರೀತಿ ಹುಚ್ಚನಾಗಿರುವುದಕ್ಕೆ ವಿವಾಹದ ಚಿಂತೆಯೇ ಕಾರಣವೆಂದು ಹೇಗೆ ಹೇಳಬಹುದು ? ಅದಕ್ಕೆ ಆಧಾರವೇನು ? ಒಂದುವೇಳೆ ನೀನು ಊಹಿಸಿರುವುದು ನಿಜವಾಗಿದ್ದಾಗ್ಯೂ ಅವನಿಗೆ ಅನುರೂಪಳಾದ ಪತ್ನಿಯು ಈ ರಾಜ್ಯದಲ್ಲಿ ದೊರಕುವುದು ಅಸಾಧ್ಯವೆಂದು ನೆನಸುತ್ತೇನೆ.

ಕಪಟಾವತಿ—ಪ್ರಿಯಾ! ನನ್ನ ಮಾತಿನಮೇಲೆ ನಿನಗೆ ನಂಬಿಕೆಯಿಲ್ಲದಿದ್ದರೆ ನಮ್ಮ ಆಪ್ತಮಂತ್ರಿಯಾದ ಕುತಂತ್ರಿಕನನ್ನು ಕರೆಯಿಸಿ ಆತನೊಂದಿಗೆ ಆಲೋಚಿಸಬಾರದೇಕೆ? ಈ ವಿಷಯವಲ್ಲಿ ಆತನ ಅಭಿಪ್ರಾಯವೂ ಸಲಹೆಯೂ ಏನಿದೆಯೋ ನೋಡೋಣ.

ಭುಜಂಗಮ— ಹೌದು, ಒಳ್ಳೇ ಯೋಚನೆ. ಈಗಲಾದರೋ ಸೂರ್ಯಾಸ್ತಮಯವಾಗುತ್ತಾ ಬಂದಿತು. ನಾಳೆ ಆತನನ್ನು ಕರೆಯಿಸಿಕೊಂಡು ಈ ವಿಷಯದಲ್ಲಿ ಆತನು ಏನು ಹೇಳುತ್ತಾನೆಂದು ತಿಳಿಯಬೇಕಾಗಿದೆ. ಎಲಾ, ಯಾರಲ್ಲಿ?

ಸೇವಕ—ಮಹಾಸ್ವಾಮಿ! ಅಪ್ಪಣೆ.

ಭುಜಂಗಮ—ನಾಳೆ ಬೆಳಿಗ್ಗೆ ಹತ್ತು ಘಂಟೆಗೆ ನಮ್ಮ ಮಂತ್ರಿಯಾದ ಕುತಂತ್ರಿಕರಾಯರನ್ನು ಕರೆದುಕೊಂಡು ಬಾ.

ಸೇವಕ—ಅಪ್ಪಣೆ.

---

# ಅಧ್ಯಾಯ 4

---

## ಪುಷ್ಪಮಾಲಿನಿ

ನಮ್ಮ ಕಥಾನಾಯಕನಾದ ಸನ್ತಾಪಕನು ಚಿಂತಾಸಂತಪ್ತನಾಗುವುದಕ್ಕೆ ಕೆಲವು ತಿಂಗಳಮುಂಚೆ ಆತನ ಮಿತ್ರನಾದ ಸೌಮಿತ್ರಕನ ಜತೆಯಲ್ಲಿ ಅರಮನೆಯ ಹೂದೋಟದಲ್ಲಿ ವಿಹರಿಸುತ್ತಿದ್ದನು. ಆ ಸಮಯದಲ್ಲಿ,

ಸೌಮಿತ್ರಕನು—ಯುವರಾಜಾ! ಇನ್ನೆಷ್ಟು ದಿನಗಳು ನೀನು ಹೀಗೆ ಅವಿವಾಹಿತನಾಗಿರಬೇಕೆಂದಿರುವಿ? ವಿವಾಹವಾಗಲು ಇದು ತಕ್ಕ ವಯಸ್ಸಲ್ಲವೇ? ನಿಮ್ಮ ತಂದೆಯ ರಾಜ್ಯಕ್ಕೆ ನಿನ್ನನ್ನು ಬಿಟ್ಟರೆ ಬಾಧ್ಯರ್ಯಾರೂ ಇಲ್ಲ. ಮಾತಾಪಿತೃಗಳು ಇನ್ನೆಷ್ಟು ದಿವಸಗಳು ತಾನೇ ಜೀವಿಸಬಹುದು? ಅವರ ಕಣ್ಣೆದುರಿನಲ್ಲಿಯೇ ನಿನಗೆ ಈ ಶುಭಕಾರ್ಯ ನಡೆದರೆ ಅವರಿಗೆ ಸಂತೋಷವಾಗುವುದಿಲ್ಲವೇ? ಯಾವುದರಲ್ಲಿ ನೀನು ಕೊರತೆಯುಳ್ಳವನಾಗಿದ್ದೀ? ರೂಪವೇ, ವಯಸ್ಸೇ, ವಿದ್ಯೆಯೇ, ಪರಾಕ್ರಮವೇ, ಜ್ಞಾನವೇ, ಧನವೇ, ವಂಶವೇ, ಯಾವುದು ಹೇಳು? ಯುವರಾಜಾ! ನನ್ನ ಮಾತನ್ನು ಉಪೇಕ್ಷಿಸದಿರು. ಬೇಗನೆ ಯಾವುದಾದರೂ ಒಂದು ವಿವಾಹವನ್ನು ಮಾಡಿಕೋ.

ಸನ್ತಾಪಕ—ಮಿತ್ರಾ, ನಿನ್ನ ಮಾತು ನಿಜವೇ ಹೌದು, ನಾನು ಒಪ್ಪಿಕೊಳ್ಳುತ್ತೇನೆ. ಮೊದಲು ವಿವಾಹದ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳುವುದು ಪ್ರಾಮುಖ್ಯವಲ್ಲವೇ? ಅನೇಕರು ಆ ಘನವಾದ ಉದ್ದೇಶವನ್ನು ತಿಳಿದುಕೊಳ್ಳದೆ ವಿವಾಹವೆಂದರೆ

ಕೇವಲ ಇಂದ್ರಿಯಸುಖವೆಂದು ಭಾವಿಸಿ ತಮ್ಮ ಜನ್ಮವನ್ನು ಮೃಗ ಜನ್ಮಕ್ಕೆ ಸಮಾನವಾಗಿ ಮಾಡಿಕೊಳ್ಳುತ್ತಾರೆ. ವಿವಾಹವಾದರೋ ಬಹು ಪವಿತ್ರವಾದುದು. ಅದರ ಉದ್ದೇಶವು ಘನವಾದುದು. ಇಂತಹ ಘನವಾದ ಉದ್ದೇಶವನ್ನು ನೆರವೇರಿಸಿ ಜನ್ಮವನ್ನು ಸಾರ್ಥಕ ಪಡಿಸಿಕೊಂಡು ಪ್ರಜಾಹಿತೈಷಿಯೂ ಲೋಕಹಿತೈಷಿಯೂ ಆಗ ಬೇಕಾದರೆ ಪುರುಷನಾದವನಿಗೆ ಉತ್ತಮಳೂ, ಗುಣಾಢ್ಯಳೂ, ಸದ್ವಂಶಸಂಭೂತಳೂ ಆದ ಕನ್ಯೆಯು ದೊರೆಯಬೇಕು. ಇಂತಹ ಸದ್ಗೃಹಿಣಿಯನ್ನು ಪಡೆದಿರುವವನ ಸಂಸಾರದಲ್ಲಿ ಸುಖ, ಸಂತೋಷ, ಸಮಾಧಾನಗಳು ನೆಲೆಗೊಂಡಿರುವುವು. ಹಾಗಲ್ಲ ದಿದ್ದರೆ ಆ ಸಂಸಾರವೂ ನರಕವೂ ಎರಡೂ ಒಂದೇ ಎಂದು ತಿಳಿಯ ಬೇಕು. ಇಂತಹ ನರಕಬಾಧೆಯನ್ನನುಭವಿಸುತ್ತಾ ನರಳುವುದ ಕ್ಕಿಂತಲೂ ಬ್ರಹ್ಮಚರ್ಯವನ್ನೇ ಪತ್ನಿಯಾಗಿ ಸ್ವೀಕರಿಸಿ ಅರಿಷಡ್ವರ್ಗ ಗಳನ್ನು ಜಯಿಸಿ ಆತ್ಮಸಂತೋಷ ಸಮಾಧಾನಗಳನ್ನು ಪಡೆ ಯುವುದು ಸರ್ವೋತ್ಕೃಷ್ಟವಾದುದು. ಈ ರಾಜ್ಯದಲ್ಲಿ ಅಂತಹ ವಿದ್ಯಾವಂತಳೂ, ಯೋಗ್ಯಳೂ, ಗುಣಾಢ್ಯಳೂ ಪ್ರಜೆಗಳ ಸುಖ ದುಃಖಗಳಲ್ಲಿ ಸಹತಾಪಪಡುವವಳೂ ಶಾಂತಚಿತ್ತಳೂ ಆದ ಕನ್ಯಾ ರತ್ನವು ದೊರೆಯುವುದು ಕಷ್ಟ. ಅಂತಹ ಅರ್ಧಾಂಗಿಯು ದೊರೆಯದಿದ್ದರೆ ವಿವಾಹವಾಗಿಯೂ ಏನು ಪ್ರಯೋಜನ? ಮಿತ್ರ, ನಿನಗೆ ತಿಳಿದಿರುವಹಾಗೆ ಯಾರಾದರೂ ಇದ್ದಾರೋ? ಹೇಳು ನೋಡೋಣ.

ಸೌಮಿತ್ರಕ—ಯುವರಾಜಾ! ಇಲ್ಲವೇಕೆ? ನಿನ್ನ ಮನೋ ಭೀಷ್ಟವನ್ನು ಸಂಪೂರ್ಣವಾಗಿ ನೆರವೇರಿಸುವ ಗುಣವತಿಯು ಕೇವಲ ಸಮೀಪದಲ್ಲಿಯೇ ಇದ್ದಾಳೆ. ಬಹಳ ಕಷ್ಟಪಡಲವಶ್ಯವಿಲ್ಲ.

ಸಸ್ನಾಪಕ—ಯಾರು?

ಸೌಮಿತ್ರಕ—ನಿಮ್ಮ ಮುಖ್ಯ ಪ್ರಧಾನಿಯಾದ ಕುತಂತ್ರಿಕ ರಾಯರ ಪುತ್ರಿಯೇ ಇರುವಳು.

ಸನ್ತಾಪಕ—ಯಾರು ? ಪುಷ್ಪಮಾಲಿನಿಯೇ ?

ಸೌಮಿತ್ರಕ—ಅಹುದೌದು, ಪುಷ್ಪಮಾಲಿನಿಯೇ.

ಸನ್ತಾಪಕ—ಆಕೆಯನ್ನು ನೋಡಿದ್ದೇನೆ. ಆಕೆಯು ಪ್ರತಿ ದಿನವೂ ನಮ್ಮ ಅರಮನೆಗೆ ಬರುತ್ತಾಳೆ. ನಮ್ಮ ತಾಯಿಯವ ರೊಂದಿಗೆ ಬಹಳ ಹೊತ್ತಿನವರೆಗೆ ಮಾತಾಡಿಕೊಂಡಿರುತ್ತಾಳೆ. ಪ್ರತಿ ಸಾಯಂಕಾಲವೂ ಆಕೆಯನ್ನು ನೋಡೇನೋಡುತ್ತೇನೆ. ಆಕೆಯು ಬಹಳ ಸೌಂದರ್ಯವತಿಯೇ ಹೌದು, ಆದರೆ........ ಒಳಗಿನ ಗುಣಸ್ವಭಾವಗಳನ್ನರಿತವರ್ಯಾರು ?

ಸೌಮಿತ್ರಕ—ಆಕೆಯು ಎಷ್ಟು ರೂಪವಂತಳೋ ಅಷ್ಟೂ ಗುಣಶಾಲಿಯಾಗಿಯೇ ಇರಬೇಕಲ್ಲವೇ ?

ಸನ್ತಾಪಕ—ಮಿತ್ರಾ, ಹಾಗೆ ಭಾವಿಸಬೇಡ. ಪ್ರಪಂಚ ದಲ್ಲಿರುವ ಹೂವುಗಳಲ್ಲಿ ಅನೇಕ ಹೂವುಗಳು ನೋಡುವುದಕ್ಕೆ ಬಹು ಅಲಂಕಾರವಾಗಿರುತ್ತವೆ. ಆದರೆ ಕಿಂಚಿತ್ತಾದರೂ ಸುವಾಸನೆಯೇ ಇರುವುದಿಲ್ಲ. ಸರ್ಪವು ನೋಡುವುದಕ್ಕೆ ಬಹಳ ಅಲಂಕಾರವಾಗಿ ರುತ್ತದೆ. ಒಳಗೆ ಏನು ? ಮರಣಕರವಾದ ವಿಷವ ಹಲ್ಲಿರುವು ದಿಲ್ಲವೇ ? ಅದರಂತೆಯೇ ಪುಷ್ಪಮಾಲಿನಿಯು ನೋಡುವುದಕ್ಕೆ ಸುರದ್ರೂಪಿಯಾಗಿರಬಹುದು. ಒಳಗೋ ? ದುರ್ಗುಣಗಳೆಂಬ ವಿಷದಿಂದ ತುಂಬಿರಬಹುದು. ಬಲ್ಲವರ್ಯಾರು ? ಕೆಲವು ಕಾಲ ಪರೀಕ್ಷಿಸಿದ ಹೊರ್ತು ತಿಳಿಯಲಾಗುವುದಿಲ್ಲ.

ಸೌಮಿತ್ರಕ— ರಾಜಪುತ್ರಾ! ಹಾಗಾದರೆ, ಕೆಲವುಕಾಲ ನೀನು ಆಕೆಯ ಗುಣನಡತೆಗಳನ್ನು ಪರೀಕ್ಷಿಸಿ, ತರುವಾಯ ನಿಶ್ಚಿಷ್ಟ ವಂತೆ ಪ್ರವರ್ತಿಸು.

ಸನ್ತಾಪಕ—ಹಾಗೆಯೇ ಮಾಡುವೆನು. ರಾಜಪತ್ನಿಯಾಗಿರಲಿಕ್ಕೆ ಆವಶ್ಯಕವಾದ ಗುಣಸ್ವಭಾವಗಳು ಆಕೆಯಲ್ಲಿ ನನಗೆ ಕಂಡು ಬಂದರೆ, ಆಕೆಯು ಯಾರೇಯಾಗಲಿ ಖಂಡಿತವಾಗಿ ನನ್ನ ಧರ್ಮಪತ್ನಿಯನ್ನಾಗಿಮಾಡಿಕೊಳ್ಳುವೆನು. ಅದಕ್ಕೆ ಅಭ್ಯಂತರವೇ ಇಲ್ಲ.

ಸೌಮಿತ್ರಕ—ಯುವರಾಜಾ ! ಸೂರ್ಯಾಸ್ತಮಯವಾಗುತ್ತಾ ಬರುತ್ತಿದೆ. ಇನ್ನು ನಾನು ಹೊರಡಲೇ ?

ಸನ್ತಾಪಕ—ಮಿತ್ರಾ, ಹೋಗಿಬಾ ಎಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು.

ಸನ್ತಾಪಕನು ಅನೇಕ ದಿನಗಳು ಪುಷ್ಪಮಾಲಿನಿಯ ಗುಣ ನಡತೆಗಳನ್ನು ಬಹು ಸೂಕ್ಷ್ಮರೀತಿಯಿಂದ ಪರೀಕ್ಷಿಸಿದನು. ತನ್ನ ಅರ್ಧಾಂಗಿಯಾಗಲು ಎಂತಹ ನಡೆ ನುಡಿಗಳು ಅವಶ್ಯಕವಾದವುಗಳಾಗಿದ್ದವೋ ಅಂತಹವುಗಳೆಲ್ಲಾ ಪುಷ್ಪಮಾಲಿನಿಯಲ್ಲಿ ಕಂಡುಬರುತ್ತಿದ್ದವು. ಇದರಿಂದ ಸನ್ತಾಪಕನು ಸಂತೋಷಭರಿತನಾಗಿ, ತನ್ನ ಧರ್ಮಪತ್ನಿಯಾಗಲು ಪುಷ್ಪಮಾಲಿನಿಯೇ ತಕ್ಕವಳೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಈ ವಿಷಯವನ್ನು ಕುರಿತು ಆಕೆಯೊಂದಿಗೆ ಆಲೋಚಿಸಲು ನಿರ್ಧರಿಸಿದನು.

ಸೌಮಿತ್ರಕನು ಒಂದು ದಿನ ವಾಡಿಕೆಯಂತೆ ಯುವರಾಜನ ದರ್ಶನಾರ್ಥವಾಗಿ ಬಂದನು. ಯುವರಾಜನಾದರೋ ಪುಷ್ಪಮಾಲಿನಿಯ ವಿಷಯವಾದ ಯೋಚನೆಯಲ್ಲಿ ಮಗ್ನನಾಗಿದ್ದನು. ಸೌಮಿತ್ರಕನು ಕೊಠಡಿಯೊಳಕ್ಕೆ ಬಂದುದರ ಅರಿವು ಸಹ ಇರಲಿಲ್ಲ.

ಸೌಮಿತ್ರಕ—ಯುವರಾಜಾ! ಏನೋ ಬಹಳ ಯೋಚಿಸುವಂತಿದೆಯಲ್ಲಾ ?

ಸನ್ತಾಪಕ—ಮಿತ್ರನೇ ಹೌದು, ಪುಷ್ಪಮಾಲಿನಿಯ ವಿಷಯ ದಲ್ಲಿ ಯೋಚಿಸುತ್ತಿದ್ದೇನೆ.

ಸೌಮಿತ್ರಕ—ಆ ವಿಷಯದಲ್ಲಿ ಇನ್ನೂ ಯಾವುದನ್ನೂ ತೀರ್ಮಾನಿಸಲಿಲ್ಲವೇ ? ಇನ್ನೆಷ್ಟು ದಿನಗಳಾಗಬೇಕು ?

ಸನ್ತಾಪಕ—ಎಷ್ಟು ದಿನಗಳೂ ಅವಶ್ಯವಿಲ್ಲ. ನೀನು ಹೇಳಿ ದಂದಿನಿಂದ ಆಕೆಯ ಗುಣನಡತೆಗಳನ್ನು ಬಹು ಸೂಕ್ಷ್ಮರೀತಿಯಿಂದ ಎಲ್ಲಾ ವಿಷಯಗಳಲ್ಲಿಯೂ ಪರೀಕ್ಷಿಸಿದೆನು. ಆಕೆಯು ನನ್ನ ಧರ್ಮ ಪತ್ನಿಯಾಗಲು ತಕ್ಕವಳೆಂದೇ ನನ್ನ ತೀರ್ಮಾನವು.

ಸೌಮಿತ್ರಕ—ಹಾಗಾದರೆ ನೀನು ಆಕೆಯಬಳಿಗೆ ಹೋಗಿ ನಿನ್ನ ಮನೋಭಿಪ್ರಾಯವನ್ನು ತಿಳಿಸಿ, ಇತ್ಯರ್ಥಮಾಡಿಕೊಳ್ಳಬಾರದೇಕೆ ?

ಸನ್ತಾಪಕ— ಆಕೆಯು ಪ್ರತಿದಿನವೂ ನಮ್ಮ ಅರಮನೆಗೆ ಬರುತ್ತಾಳೆ. ಈ ಸಾಯಂಕಾಲ ಆಕೆಯನ್ನು ನೋಡಿ ನನ್ನ ಮನೋಭಿಪ್ರಾಯವನ್ನು ಆಕೆಗೆ ತಿಳಿಸುತ್ತೇನೆ. ಹೌದು, ಖಂಡಿತ ಆಕೆಯನ್ನೇ ನನ್ನ ಪತ್ನಿಯನ್ನಾಗಿ ಮಾಡಿಕೊಳ್ಳುತ್ತೇನೆ. ಈಗ ಆಕೆ ಬರುವ ಸಮಯವಾಯಿತು. ನನ್ನ ಜೊತೆಯಲ್ಲಿ ನೀನೂ ಬಾ, ಹೋಗೋಣ.

ಸೌಮಿತ್ರಕ—ಯುವರಾಜಾ ! ನಾನೇಕೆ ಬರಲಿ ? ನೀನೇ ಹೋಗು. ಇಂತಹ ಸಮಯವಲ್ಲಿ ನಾನು ಬರುವುದು ಉಚಿತವಲ್ಲ. ನಾನು ಬಂದು ಬಹಳ ಹೊತ್ತಾಯಿತು. ಪುನಹ ನಾಳೆ ನಿನ್ನನ್ನು ನೋಡುತ್ತೇನೆ ಎಂದು ಹೇಳಿ ಹೊರಟುಹೋದನು.

ಸನ್ತಾಪಕನು ತನ್ನ ಕೊಠಡಿಗೆ ಹೋಗಿ ಶ್ರೇಷ್ಠವಾದ ವಸ್ತ್ರ ಗಳನ್ನು ಧರಿಸಿಕೊಂಡು ಮಂತ್ರಿಕುಮಾರಿಯ ದರ್ಶನಕ್ಕಾಗಿ ಅರ ಮನೆಯ ಮುಂಭಾಗದಲ್ಲಿಯೇ ತಿರುಗಾಡುತ್ತಿದ್ದನು. ಮಂತ್ರಿ

ಕುಮಾರಿಯಾದ ಪುಷ್ಪಮಾಲಿನಿಯು ಅಲ್ಲಿಗೆ ನಿರೀಕ್ಷಿಸುತ್ತಿದ್ದಂತೆಯೇ ಬಂದಳು. ರಾಜಕುಮಾರನಾದ ಸನ್ತಾಪಕನು ಎಂದಿನಂತೆ ಆಕೆಯನ್ನು ಸಂತೋಷದಿಂದ ಸ್ವಾಗತಮಾಡಿ ಒಳಗೆ ಕರೆದುಕೊಂಡು ಹೋಗಿ ಅಂತಃಪುರದಲ್ಲಿ ಬಿಟ್ಟು ತಾನು ಹಿಂದಿರುಗಿ ಅರಮನೆಯ ಮುಂಭಾಗದಲ್ಲಿ ಆಕೆಗಾಗಿ ನಿರೀಕ್ಷಿಸಿಕೊಂಡಿದ್ದನು. ಅನೇಕ ದಿವಸ ಗಳಿಂದ ಪ್ರತಿದಿನವೂ ಆಕೆಯನ್ನು ನೋಡುತ್ತಿದ್ದಾಗ್ಯೂ ಆ ದಿನ ಆಕೆಯನ್ನು ನೋಡಿದಾಗ ಉಂಟಾದ ಆನಂದವನ್ನು ಸನ್ತಾಪ ಕನು ಎಂದೂ ಅನುಭವಿಸಿರಲಿಲ್ಲ. ಒಂದು ತಾಸಾಯಿತು, ಪುಷ್ಪ ಮಾಲಿನಿಯು ಇನ್ನೂ ಹೊರಗೆ ಬರಲಿಲ್ಲ. ಅಂತಃಪುರದ ದ್ವಾರಕ್ಕೆ ಅಡಿಗಡಿಗೂ ಹೋಗಿ ನೋಡಿದನು. ಆಕೆಯ ಸುಳಿವೇ ಇಲ್ಲ. ಯಾಕೆ ಇನ್ನೂ ಬರಲಿಲ್ಲವಲ್ಲಾ? ಏನುಮಾಡುತ್ತಿರಬಹುದು? ಎಂದು ತವಕಪಡುತ್ತಿದ್ದನು. ಕತ್ತಲಾಯಿತು. ಯಾವುದೋ ಒಂದು ವ್ಯಕ್ತಿಯು ಅಂತಃಪುರದ ಕಡೆಯಿಂದ ಬರುತ್ತಿರುವಂತೆ ಕಂಡಿತು. ಕತ್ತಲಾಗಿದ್ದುದರಿಂದ ಯಾರೆಂಬುದನ್ನು ಗುರ್ತಿಸಲು ಸಾಧ್ಯವಾಗದೆ ಸನ್ತಾಪಕನು—ಯಾರದು? ಎಂದು ಕೇಳಿದನು.

ಪುಷ್ಪಮಾಲಿನಿ—ರಾಜಕುಮಾರಾ! ಯಾಕೆ? ನಾನಲ್ಲವೇ?

ಸನ್ತಾಪಕ—ಯಾರು? ಪುಷ್ಪಮಾಲಿನಿಯೇ?

ಪುಷ್ಪಮಾಲಿನಿ—ಹೌದು.

ಸನ್ತಾಪಕ—ಪುಷ್ಪಮಾಲಿನೀ! ಯಾಕೆ ಇಷ್ಟು ತಡವಾಯಿತು? ನಿನಗಾಗಿ ನಾನು ಬಹಳ ಹೊತ್ತಿನಿಂದಲೂ ನಿರೀಕ್ಷಿಸುತ್ತಾ ಇಲ್ಲೇ ತಿರುಗಾಡುತ್ತಿದ್ದೇನೆ. ಒಂದು ವಿಶೇಷವಾದ ಸಂಗತಿಯನ್ನು ಕುರಿತು ನಿನ್ನ ಕೂಡ ಆಲೋಚಿಸಬೇಕಾಗಿದೆ. ನಮ್ಮ ಹೂ ದೋಟಕ್ಕೆ ಹೋಗೋಣ ಬಾ.

ಪುಷ್ಪಮಾಲಿನಿ—ಯುವರಾಜಾ! ನನ್ನ ಕೂಡ ಆಲೋಚಿಸ ಬೇಕಾಗಿರುವ ಅಂತಹ ಸಂಗತಿ ಏನು? ಇಲ್ಲಿಯೇ ಹೇಳಲಾಗುವು ದಿಲ್ಲವೇ?

ಸನ್ತಾಪಕ—ಪುಷ್ಪಮಾಲಿನೀ, ಇಲ್ಲಿ ಹೇಳುವ ಸಂಗತಿಯಲ್ಲ. ಅದು ನಮ್ಮಿಬ್ಬರನ್ನೂ ಕುರಿತ ಒಂದು ಅಂತರಂಗವಾದ ಸಂಗತಿ. ಅನುಮಾನಿಸದೆ ನನ್ನೊಡನೆ ಬಾ ಎಂದು ಹೇಳಿ ಆಕೆಯನ್ನು ಕರೆದು ಕೊಂಡು ಹೂದೋಟದೊಳಕ್ಕೆ ಹೋದನು.

ರಾತ್ರಿ ಸುಮಾರು ಎಂಟು ಘಂಟೆ. ಇವರಿಬ್ಬರೂ ತೋಟ ದೊಳಗೆ ಕಾಲಿಡುತ್ತಲೇ ಗುಂಪಾಗಿದ್ದ ಮರಗಳ ಕೊಂಬೆಗಳ ಮಧ್ಯ ದಿಂದ ಚಂದ್ರನು ಇವರಿಬ್ಬರನ್ನೂ ನೋಡಿ ನಗುತ್ತಾನೆಯೋ ಎಂಬುವಂತೆ ತಲೆದೋರಿದನು. ಇಡೀ ತೋಟದಲ್ಲಿ ಹಾಲು ಚೆಲ್ಲಿದಂತೆ . ಬೆಳದಿಂಗಳ ಪ್ರಕಾಶವು ಹರಡಿ, ಕಂಗೊಳಿಸುತ್ತಿ ದ್ದಿತು. ತೋಟದ ಗಾಂಭೀರ್ಯವೂ ಅಲ್ಲಂಕಾರವೂ ದ್ವಿಗುಣ ವಾಯಿತು. ವೃಕ್ಷಗಳಮೇಲೆ ಅಲ್ಲಲ್ಲಿ ಪಕ್ಷಿಗಳ ಪಟಪಟ ಶಬ್ದವು ಕೇಳಿಬರುತ್ತಿದ್ದಿತು. ಪುಷ್ಪರಾಶಿಗಳು ಅರಳಿ ತಂಗಾಳಿಯ ಮೂಲಕ ಸುಗಂಧವನ್ನು ತೋಟದ ಎಲ್ಲಾ ಕಡೆಗಳಲ್ಲಿಯೂ ಹಬ್ಬಿಸಿದವು. ಪುಷ್ಪಮಾಲಿನಿಯೂ ಸನ್ತಾಪಕನೂ ಅಲ್ಲಿದ್ದ ಒಂದು ಅಮೃತಶಿಲೆಯ ಪೀಠದಮೇಲೆ ಕುಳಿತುಕೊಂಡರು. ಬೆಳದಿಂಗಳ ಬೆಳಕಿನಲ್ಲಿ ಒಬ್ಬರ ಮುಖವನ್ನು ಒಬ್ಬರು ವಿಸ್ಮಯದಿಂದ ನೋಡಿಕೊಳ್ಳುತ್ತಿದ್ದರು. ಯಾರ ಬಾಯಿಂದಲೂ ಇನ್ನೂ ಮಾತೇ ಹೊರಡದಿದ್ದಾಗ್ಯೂ ಉಭಯರ ಹೃದಯಾಂತರ್ಯಗಳು ಪ್ರೇಮಭಾಷಣವನ್ನು ಮಾಡು ತ್ತಿವೆಯೋ ಎಂಬಂತೆ ಮುಖಕಮಲಗಳು ಕಂಗೊಳಿಸುತ್ತಿದ್ದವು. ಕಡೆಗೆ

ಸನ್ತಾಪಕ—ಪುಷ್ಪಮಾಲಿನೀ! ಸಾಯಂಕಾಲದಿಂದ ನಾನು ನಿನ್ನ ವಿಷಯವಾಗಿ ಬಹಳ ಯೋಚನೆ ಮಾಡುತ್ತಿದ್ದೇನೆ.

ಪುಷ್ಪಮಾಲಿನಿ— ರಾಜಕುಮಾರ ! ನನ್ನ ವಿಷಯವಾಗಿ ಯೋಚನೆ ಏನು ?

ಸನ್ತಾಪಕ—ನಾನು ನಿನ್ನನ್ನು ನನ್ನ ಅರ್ಧಾಂಗಿಯಾಗಿ ವರಿಸಲು ಅಪೇಕ್ಷಿಸುತ್ತೇನೆ.

ಪುಷ್ಪಮಾಲಿನಿ— (ದಿಗ್ಭ್ರಮೆ ಹೊಂದಿದವಳಾಗಿ) ರಾಜಕುಮಾರಾ, ಏನಂದೆ ?

ಸನ್ತಾಪಕ—ನನ್ನ ಅರ್ಧಾಂಗಿಯಾಗಿ ನಿನ್ನನ್ನು ವರಿಸಲು ಅಪೇಕ್ಷಿಸುತ್ತೇನೆ.

ಪುಷ್ಪಮಾಲಿನಿ—ರಾಜರಾದಂಥವರು ತಮ್ಮ ಸೇವಾವೃತ್ತಿಯಲ್ಲಿರುವ ಸಾಧಾರಣನಾದ ಒಬ್ಬ ಅಧಿಕಾರಿಯ ಮಗಳನ್ನು ವರಿಸಬಹುದೇ ? ಇದು ಸಾಧ್ಯವೇ ? ನಿಮ್ಮನ್ನು ನನ್ನ ಪತಿಯಾಗಿ ವರಿಸುವಷ್ಟು ಯೋಗ್ಯತೆಯು ನನಗಿದೆಯೇ ?

ಸನ್ತಾಪಕ—ಪುಷ್ಪಮಾಲಿನೀ, ಅದು ಸಾಧ್ಯ; ಮತ್ತು ಅದಕ್ಕೆ ನಿನಗೆ ಯೋಗ್ಯತೆಯೂ ಇದೆ. ನೀನು ಸಮ್ಮತಿಸುವೆಯಾ ?

ಪುಷ್ಪಮಾಲಿನಿ—ಯುವರಾಜಾ, ನಾನು ಸ್ವತಂತ್ರಳಲ್ಲ. ತಾಯಿ ತಂದೆಗಳ ಅಧೀನದಲ್ಲಿರುವೆನಾದುದರಿಂದ ಈ ವಿಷಯದಲ್ಲಿ ಅವರ ಅನುಮತಿಯು ಅತ್ಯಾವಶ್ಯಕವಾಗಿದೆ.

ಸನ್ತಾಪಕ—ಮುಂದೆ ಅವರ ಅನುಮತಿಯನ್ನು ಕೇಳುವುದಾಗುತ್ತದೆ. ಈಗ ಸಧ್ಯಃ ನಿನ್ನ ಅಭಿಪ್ರಾಯವೇನು ?

ಪುಷ್ಪಮಾಲಿನಿ—ಈಗ ನನ್ನ ಅಭಿಪ್ರಾಯವನ್ನು ಹೇಗೆತಾನೇ ಹೇಳಲಾಗುವುದು ? ನನ್ನ ತಾಯಿತಂದೆಗಳ ಅಭಿಪ್ರಾಯವು ಹೇಗಿರುವುದೋ ಏನೋ !

ಸನ್ತಾಪಕ—ನಿನ್ನ ತಾಯಿತಂದೆಗಳು ಅನುಮತಿಯನ್ನಿತ್ತರೆ ನನ್ನ ಅರ್ಧಾಂಗಿಯಾಗಲು ಸಮ್ಮತಿಸುವೆಯಾ ?

ಪುಷ್ಪಮಾಲಿನಿಯು ತಲೆ ಬೊಗ್ಗಿಸಿ ಮೌನವಾಗಿದ್ದಳು.

ಸನ್ತಾಪಕ—ಪುಷ್ಪಮಾಲಿನೀ, ಮಾತಾಡುವುದಿಲ್ಲವೇಕೆ ? ಸಮ್ಮತಿಸುತ್ತೇನೆಂಬುವುದನ್ನು ನಿನ್ನ ಮೌನದಿಂದಲೇ ಪ್ರಕಟಿಸಿದೆಯಾ ? ಬಹಳ ಕತ್ತಲಾಗುತ್ತಾಬಂದಿತು. ಬೇಗ ಹೇಳು.

ಪುಷ್ಪಮಾಲಿನಿ— (ಮುಗುಳು ನಗೆಯಿಂದ) ಹೇಳುವುದಿನ್ನೇನಿದೆ ? ನಾನು ಹೇಳಬೇಕಾದದ್ದನ್ನು ನಿವೇ ಗ್ರಹಿಸಿದಿರಲ್ಲಾ !

ಸನ್ತಾಪಕ—ಹಾಗಾದರೆ ಇಂದಿನಿಂದ ನಿನ್ನನ್ನು ನನ್ನ ಪ್ರಿಯಳೆಂದು ತಿಳಿದು ಪ್ರಿಯೇ! ಎಂದು ಕರೆಯಲು ಅಪ್ಪಣೆ ಕೊಡುವೆಯಾ ?

ಪುಷ್ಪಮಾಲಿನಿ—(ಮುಗುಳು ನಗೆಯಿಂದ) ತಮ್ಮ ಇಷ್ಟದಂತೆ ಕರೆಯಬಹುದು. ತಮಗೆ ನನ್ನ ಅಪ್ಪಣೆಯೇ ಅನಾವಶ್ಯಕವಾಗಿದೆಯಲ್ಲವೇ ?

ಸನ್ತಾಪಕ (ಸಂತೋಷದಿಂದ)—ನನ್ನ ಪ್ರಿಯೇ, ನಿನ್ನ ಅನುಮತಿಗಾಗಿ ನಿನ್ನ ಉಪಕಾರಸ್ಮರಣೆ ಮಾಡುತ್ತೇನೆ. ಕತ್ತಲಾಯಿತು. ನಿನ್ನ ತಾಯಿತಂದೆಗಳು ನಿನಗಾಗಿ ಕಾದಿರಬಹುದು. ಬೇಗನೆ ಹೋಗು.

ಪುಷ್ಪಮಾಲಿನಿ—ನಾನೊಬ್ಬಳೇ ಹೋಗಬೇಕೇ ?

ಸನ್ತಾಪಕ—ನಾನೂ ನಿನ್ನ ಜೊತೆಯಲ್ಲಿ ಬರಲೋ ?

ಪುಷ್ಪಮಾಲಿನಿ—ಹೌದು, ಬಂದರೆ ನನಗೆ ಬಹಳ ಸಂತೋಷ.

ತರುವಾಯ ಇಬ್ಬರೂ ಹೂದೋಟದಿಂದ ಹೊರಗೆ ಬಂದು ಪುಷ್ಪಮಾಲಿನಿಗಾಗಿ ಕಾದಿದ್ದ ನಾಲ್ಕುಕುದುರೆಗಳ ಗಾಡಿಯಲ್ಲಿ ಕುಳಿತು ಪುಷ್ಪಮಾಲಿನಿಯ ಮನೆಯ ದ್ವಾರದ ಬಳಿಗೆ ಬಂದರು. ಸನ್ತ್ರಾಪಕನು ಆಕೆಯನ್ನು ಕುರಿತು ಪ್ರಿಯೇ, ಇನ್ನು ನೀನು ಹೋಗು; ನಾಳೆ ಸಾಯಂಕಾಲ ನಿನಗೋಸ್ಕರ ನಮ್ಮ ಹೂದೋಟದಲ್ಲಿ ಕಾದಿರುವೆನು ಎಂದು ಹೇಳಿ ಪುಷ್ಪಮಾಲಿನಿಯನ್ನು ಆಲಂಗಿಸಿಕೊಂಡು ಗಾಡಿಯಿಂದ ಇಳಿದು ತನ್ನ ಅರಮನೆಗೆ ಹೊರಟುಹೋದನು.

ಪುಷ್ಪಮಾಲಿನಿಯು ಆ ರಾತ್ರಿ ಬಹಳ ಹೊತ್ತಾದಾಗ್ಯೂ ಮನೆಗೆ ಬಾರದೆ ಇದ್ದುದರಿಂದ ಈಕೆಯ ತಾಯಿತಂದೆಗಳು ಊಟವನ್ನು ಸಹ ಮಾಡದೆ ಆಗಾಗ್ಗ ಹೊರಗೆ ದ್ವಾರದಬಳಿಗೆ ಬಂದು ನೋಡಿನೋಡಿ ಹೋಗುತ್ತಿದ್ದರು. ಬಹಳ ಹೊತ್ತಿನಮೇಲೆ ಬಂದ ಮಗಳನ್ನು ನೋಡಿ ತಂದೆತಾಯಿಗಳಿಗೆ ಬಹಳ ಸಂತೋಷವಾಗಿ ಊಟೋಪಚಾರಗಳೆಲ್ಲಾ ತೀರಿದಮೇಲೆ ತಂದೆಯಾದ ಕುತಂತ್ರಿಕನು ಮಗಳನ್ನು ಕುರಿತು—ಕುಮಾರೀ! ಈ ದಿನ ಸಾಯಂಕಾಲ ಅರಮನೆಗೆ ಹೋಗಿದ್ದ ನೀನು ಹಿಂತಿರುಗಿಬರಲು ಇಷ್ಟು ತಡವೇಕಾಯಿತು? ಎಂದು ಕೇಳಿದನು. ಅದಕ್ಕೆ

ಪುಷ್ಪಮಾಲಿನಿ—ಅಪ್ಪಾಜೀ, ಹೌದು, ತಡವಾಯಿತು.

ತಂದೆ—ಯಾಕೆ? ಮಹಾರಾಣಿಯವರು ಬಿಡಲಿಲ್ಲವೇ?

ಮಗಳು—ಬಿಟ್ಟರು. ಆದರೆ........

ತಂದೆ—ಆದರೇನು ?

ಮಗಳು—ಯುವರಾಜನು ಒಂದು ವಿಶೇಷವಾದ ಸಂಗತಿಯನ್ನು ಕುರಿತು ಮಾತನಾಡಬೇಕೆಂದು ನನ್ನನ್ನು ಹೂದೋಟಕ್ಕೆ

ಕರೆದುಕೊಂಡು ಹೋಗಿ ಬಹಳಹೊತ್ತಿನತನಕ ಮಾತಾಡಿ ಕೊಂಡಿದ್ದನು.

ತಂದೆ—ಏನು ? ಯುವರಾಜ ! ಏನು ವಿಶೇಷ ಸಂಗತಿ ? ಮಗೂ, ವಿಶೇಷಸಂಗತಿ ಅಂದರೆ ಏನು ?

ಮಗಳು—(ನಾಚಿಕೆಯಿಂದ) ಯುವರಾಜನಿಗೆ ನನ್ನನ್ನು ತನ್ನ ಧರ್ಮಪತ್ನಿಯನ್ನಾಗಿ ವರಿಸಬೇಕೆಂಬ ಅಪೇಕ್ಷೆ ಇದೆಯಂತೆ.

ತಂದೆ—ಏನು ? ಯುವರಾಜನಿಗೆ ನೀನು ಪತ್ನಿಯೆ ?

ಮಗಳು—ಹೌದು.

ತಂದೆ—ಮಗಳೇ, ಅದಕ್ಕೆ ನೀನು ಸಮ್ಮತಿಸಿದೆಯಾ ?

ಮಗಳು— ನನ್ನ ತಾಯಿತಂದೆಗಳನ್ನು ಕೇಳಬೇಕೆಂದು ಹೇಳಿದೆನು.

ತಂದೆ—ಆಹಾ ! ಕೆಲಸಕೆಟ್ಟಿತು. ಯಾಕೆ ಒಪ್ಪಿಕೊಳ್ಳದೆ ಹೋದಿ ?

ಮಗಳು— ತಾಯಿತಂದೆಗಳಾದ ತಮ್ಮ ಅನುಮತಿಯಿಲ್ಲದೆ ನಾನು ಒಪ್ಪಿಕೊಳ್ಳುವುದೆಂದರೇನು ?

ತಂದೆ—ಕುಮಾರೀ! ನೀನು ಹುಚ್ಚುಕೆಲಸಮಾಡಿದಿ. ನೀನು ಯುವರಾಜನನ್ನು ವಿವಾಹಮಾಡಿಕೊಂಡರೆ ಈ ರಾಜ್ಯವೆಲ್ಲಾ ನಿನ್ನನ್ನು ಮಹಾರಾಣಿಯೆಂದು ಕರೆಯುತ್ತಿದ್ದರಲ್ಲಾ ! ಎಂತಹ ಶ್ರೇಷ್ಠಪದವಿ ! ವ್ಯರ್ಥವಾಗಿ ಕಳೆದುಕೊಂಡಿ! ಕಳೆದುಕೊಂಡಿ!! ಛೆ, ಛೆ, ಛೇ....ಉಸ್ ........ಯುವರಾಜನು ಬಹಳ ಸಿಟ್ಟಾಗಿರಬೇಕಲ್ಲವೇ ? ನೀನು ಎಂತಹ ಹುಚ್ಚಿ, ಎಂತಹ ಹುಚ್ಚಿ !

ಮಗಳು—ಅಪ್ಪಾಜೀ, ನಿನ್ನಂತಹ ವಿವೇಕಿಯ ಮಗಳಾಗಿ ನಾನು ಹುಚ್ಚಳಾದೇನೆ ?

ತಂದೆ—ಮಗಳೇ, ನೀನು ನನ್ನ ಮಗಳಾಗಿ ಹುಟ್ಟಿಯೂ ಪ್ರಯೋಜನವೇನಾದಹಾಗಾಯಿತು? ತಾನಾಗಿ ಬಂದ ರಾಜ್ಯಲಕ್ಷ್ಮಿಯನ್ನು ಅವಿವೇಕದಿಂದ ಹೊರಗಟ್ಟಿದಿಯಲ್ಲಾ!

ಮಗಳು—ನಾನು ಹಾಗೇನೂ ಅಟ್ಟಲಿಲ್ಲ.

ತಂದೆ—ಹಾಗಾದರೆ ಏನು ಮಾಡಿದಿ? ಏನು ಹೇಳಿದಿ? ಯುವರಾಜನಿಗೆ ಸಿಟ್ಟಾಗಲಿಲ್ಲವೇ?

ಮಗಳು—ಯುವರಾಜನು ಹಾಗೆ ಸಿಟ್ಟಾಗಿದ್ದರೆ ಕತ್ತಲಾದ ಮೇಲೆ ನನ್ನನ್ನು ಮನೆಬಾಗಲಿನವರೆಗೂ ಕರೆದುಕೊಂಡುಬಂದು ಬಿಟ್ಟು, ತಾನು ಕಾಲ್ನಡಿಗೆಯಲ್ಲಿ ಅರಮನೆಗೆ ಹೋಗುತ್ತಿದ್ದನೇ?

ತಂದೆ—ಕುಮಾರೀ, ಯುವರಾಜನು ನಿನ್ನನ್ನು ಕರೆದುಕೊಂಡು ಬಂದನೇ?

ಮಗಳು—ಹೌದು!

ತಂದೆ—ಕುಮಾರೀ, ಏನು ಹೇಳಿದಿ?

ಮಗಳು—ನನ್ನ ತಾಯಿತಂದೆಗಳು ಸಮ್ಮತಿಸಿದರೆ ನಾನೂ ಸಮ್ಮತಿಸುತ್ತೇನೆಂದು ಹೇಳಿದೆನು.

ತಂದೆ—ವಾಹವ್ವಾ! ನೀನು ನನ್ನ ಮಗಳಾದುದಕ್ಕೆ ಸಾರ್ಥಕವಾಯಿತು. ಯುವರಾಜನು ಇನ್ನೇನೂ ಹೇಳಲಿಲ್ಲವೇ?

ಪುಷ್ಪಮಾಲಿನಿ—ಇನ್ನೇನೂ ಹೇಳಲಿಲ್ಲ. ಹೋಗುವಾಗ ಮಾತ್ರ ಪ್ರಿ.... "ನಾಳೆ ಸಾಯಂಕಾಲ ನಿನಗೋಸ್ಕರ ಹೂದೋಟದಲ್ಲಿ ಕಾದಿರುವೆನು" ಎಂದು ಹೇಳಿದನು.

ತಂದೆಯು (ತನ್ನ ಮನಸ್ಸಿನಲ್ಲಿ) ಏನು? ಯುವರಾಜನು ನಿಜವಾಗಿಯೂ ನನ್ನ ಮಗಳನ್ನು ಮದುವೆ ಮಾಡಿಕೊಂಡಾನೇ?

ನಾನಾದರೋ ಒಬ್ಬ ಸೇವಕನಿಗೆ ಸಮಾನನು. ಒಂದುವೇಳೆ ಹಾಸ್ಯ ಕ್ಕಾಗಿ 'ಹಾಗೆ ಹೇಳಿದನೋ ಏನೋ? ಹಾಗೇನಾದರೂ ಯುವರಾಜನು ನನ್ನ ಮಗಳನ್ನು ವಿವಾಹಮಾಡಿಕೊಂಡರೆ ನನ್ನ ಮಗಳು ಒಂದಾ ನೊಂದು ದಿನ ಮಹಾರಾಣಿಯಾಗುವುದು ಖಂಡಿತ. ನಾನು ಮಹಾ ರಾಣಿಯ ತಂದೆಯಾಗುತ್ತೇನೆ. ಆಗ ನನಗಿಂತಲೂ ಧನ್ಯರಿರುವರೇ ? ಮಹಾರಾಜನೂ ಮಹಾರಾಣಿಯೂ ಇದಕ್ಕೆ ಒಪ್ಪುವುದು ಮಾತ್ರ ಬಹಳ ಕಷ್ಟವೆಂದು ನೆನಸುತ್ತೇನೆ. ಯುವರಾಜನು ತಾನಾಗಿ ಒಪ್ಪಿ ವಿವಾಹವಾದರೆ ಅವರು ಏನುತಾನೇ ಮಾಡ್ಯಾರು ? ಹ್ಯಾಗಾದರೂ ಯುವರಾಜನು ನನ್ನ ಮಗಳನ್ನು ವಿವಾಹವಾಗುವ ಪ್ರಯತ್ನವನ್ನೇ ಮಾಡಬೇಕು ಎಂದು ಸ್ವಲ್ಪಹೊತ್ತು ಆಲೋಚಿಸಿ, ಮಗಳನ್ನು ನೋಡಿ —ಕುಮಾರೀ, ನಾಳೆ ನಿನ್ನಲ್ಲಿರುವ ಶ್ರೇಷ್ಠವಾದ ವಸ್ತ್ರಾಭರಣಗಳನ್ನು ಹಾಕಿಕೊಂಡು ಸ್ವಲ್ಪ ಮುಂಚಿತವಾಗಿಯೇ ಹೋಗು. ಯುವ ರಾಜನು ನಿಜವಾಗಿ ಪ್ರೀತಿಸುತ್ತಾನೋ ಇಲ್ಲವೋ ನನಗೆ ಸಂಶಯ ವಾಗಿದೆ. ಈ ನನ್ನ ಸಂಶಯವು ನಿವಾರಣೆಯಾಗಬೇಕಾದರೆ ಯುವ ರಾಜನು ನಿನ್ನನ್ನು ಎಷ್ಟು ಪ್ರೀತಿಸಿದಾಗ್ಯೂ ನೀನು ಮಾತ್ರ ಸ್ವಲ್ಪ ಅಲಕ್ಷ್ಯಭಾವದಿಂದಲೇ ಇರುವಂತೆ ನಟಿಸು. ಆತನು ನಿನ್ನನ್ನು ಪ್ರೀತಿಸಿ ನಿನ್ನನ್ನು ವಿವಾಹವಾಗುವುದು ಯಥಾರ್ಥವಾಗಿದ್ದರೆ ನೀನು ಅಲಕ್ಷ್ಯದಿಂದಿರುವಷ್ಟೂ ಆತನಿಗೆ ನಿನ್ನ ಮೇಲಣ ಪ್ರೀತಿಯು ವೃದ್ಧಿ ಯಾಗುತ್ತಾ ಬರುವುದು. ಆತನು ನಿನ್ನನ್ನು ಪ್ರೀತಿಸಿ ಖಂಡಿತವಾಗಿ ವಿವಾಹವಾಗುತ್ತಾನೆಂಬುವುದಕ್ಕೆ ಇದೇ ಮುಖ್ಯ ಗುರುತು. ಎಚ್ಚರಿಕೆ ಯಾಗಿರು ! ಆತನೇನಾದರೂ ನಿನಗೆ ಪತ್ರಗಳನ್ನು ಬರೆದರೆ ನನಗೆ ತೋರಿಸದೆ ಇರಬೇಡ. ತಿಳಿಯಿತೇ ? ಈಗ ಹೋಗಿ ಮಲಗಿಕೋ, ಬಹಳ ಹೊತ್ತಾಯಿತು ಎಂದು ಮಗಳನ್ನು ಕಳುಹಿಸಿ ತಾನೂ ಮಲ ಗುವುದಕ್ಕೆ ಹೋದನು.

ಅಂದಿನಿಂದ ಪುಷ್ಪಮಾಲಿನಿಯು ಅರಮನೆಗೆ ಹೋದಾಗಲೆಲ್ಲಾ ಸನ್ತಾಪಕನೊಂದಿಗೆ ಅಲ್ಪಸ್ವಲ್ಪ ಸಂಭಾಷಣೆಯನ್ನು ಮಾಡಿ ತನ್ನ ನಿಜಭವನಕ್ಕೆ ಬರುತ್ತಿದ್ದಳು. ಆಕೆಗೆ ಸನ್ತಾಪಕನೊಂದಿಗೆ ಧಾರಾಳ ವಾಗಿ ವರ್ತಿಸಲು ಪೂರ್ಣ ಮನಸ್ಸಿದ್ದಾಗ್ಯೂ ತಂದೆಯ ಆಜ್ಞೆಗೆ ಕಟ್ಟುಬಿದ್ದವಳಾದುದರಿಂದ ಹಿಂದೆಗೆಯುತ್ತಿದ್ದಳು. ಆಕೆಗೆ ದಿವಾ ರಾತ್ರಿಗಳಲ್ಲಿಯೂ ಯುವರಾಜನ ಶರೀರಾಕೃತಿಯು ಕಣ್ಣೆದುರಿ ನಲ್ಲಿಯೇ! ಆತನ ಪ್ರೇಮಭಾಷಣವು ಕಿವಿಗಳ ಸಮೀಪದಲ್ಲಿಯೇ! ಸನ್ತಾಪಕನ ದರ್ಶನಕ್ಕಾಗಿ ಸಾಯಂಕಾಲ ಯಾವಾಗ ಬರುವುದೋ ಎಂದು ಆತುರದಿಂದ ನಿರೀಕ್ಷಿಸುತ್ತಾ ಪದೇ ಪದೇ ಹೊರಗೆಬಂದು ಸೂರ್ಯನ ಕಡೆಗೆ ನೋಡುತ್ತಿದ್ದಳು. ಸನ್ತಾಪಕನ ಅವಸ್ಥೆ ಯಾದರೋ ಹೇಳತೀರದು. ವಿದ್ಯಾಭ್ಯಾಸದಲ್ಲಿಯೂ ಇತರ ಕಾರ್ಯ ಗಳಲ್ಲಿಯೂ ಆಸಕ್ತಿ ಕುಗ್ಗಿಹೋಯಿತು. ದಿವಾರಾತ್ರಿಗಳಲ್ಲಿಯೂ ಪುಷ್ಪಮಾಲಿನಿಯ ನಾಮೋಚ್ಚಾರಣೆಯೇ ಮುಖ್ಯ ಮಂತ್ರವಾಯಿತು. ಆಕೆಯ ರೂಪವನ್ನು ಕಾಗದಗಳಮೇಲೆ ಚಿತ್ರಿಸಿ ಅದನ್ನು ನೋಡಿ ಕೊಂಡು ಆನಂದಿಸುವುದೇ ರಾಜಕಾರ್ಯವಾಯಿತು. ಆಕೆಯ ಭಾಷ ಣದ ನೆನಪು ವೀಣಾಗಾನದಂತೆ ಕಿವಿಗಳಿಗೆ ಬಹು ಇಂಪಾಗಿದ್ದಿತು. ಆಕೆಯ ಕೋಮಲವಾದ ರೂಪಾತಿಶಯವು ಕಣ್ಣುಗಳಿಗೆ ಮನೋ ಹರವಾದ ದೃಶ್ಯವಾಯಿತು. ಪ್ರೇಮಲೇಖನಗಳಾದರೋ ಘಂಟೆ ಗೊಂದು ಸಾರಿ ಒಬ್ಬರ ಕೊಠಡಿಯಿಂದ ಮತ್ತೊಬ್ಬರ ಕೊಠಡಿಗೆ ಅಂತರಂಗದಲ್ಲಿಯೇ ಹಾರಾಡುತ್ತಿದ್ದವು. ತನ್ನ ಪ್ರೀತಿಯನ್ನು ವ್ಯಕ್ತ ಪಡಿಸುವುದಕ್ಕಾಗಿ ಅಮೂಲ್ಯವಾದ ವಸ್ತ್ರಾಭರಣಗಳನ್ನು ಕಳುಹಿ ಸುತ್ತಿದ್ದನು. ಇಷ್ಟಾದಾಗ್ಯೂ ಪುಷ್ಪಮಾಲಿನಿಯು ಮಾತ್ರ ತನ್ನ ಅಂತರ್ಯ ಪ್ರೀತಿಯನ್ನು ಪ್ರಕಟಿಸದೆ ಇದ್ದಳು. ಆ ಪ್ರೀತಿಯು ಒಂದೊಂದು ಸಾರಿ ನಿರ್ವಾಹವಿಲ್ಲದೆ ಉಜ್ವಲಿಸಲು ಪ್ರಾರಂಭಿಸಿದ

ಕೂಡಲೇ ತಂದೆಯಾಜ್ಞೆ ಎಂಬ ಶೀತೋದಕವು ಅದನ್ನು ಆರಿಸಿಬಿಡುತ್ತಿದ್ದಿತು. ಪಾಪ! ಏನುತಾನೇ ಮಾಡಿಯಾಳು?

ಹೀಗೆ ಇವರಿಬ್ಬರೂ ಪ್ರೇಮಲತೆಯಿಂದ ಬಂಧಿಸಲ್ಪಟ್ಟಿದ್ದಾಗ್ಯೂ ಯಾವಾಗ ಪಿತೃವಿನ ಅಕಾಲಮರಣದಿಂದ ಸನ್ತಾಪಕನು ಚಿಂತಾಸಂತಪ್ತನಾದನೋ, ಯಾವಾಗ ತನ್ನ ಕಾರ್ಯಸಾಧನೆಗಾಗಿ ಹುಚ್ಚನಂತೆ ನಟಿಸಬೇಕೆಂದು ದೃಢಸಂಕಲ್ಪ ಮಾಡಿಕೊಂಡನೋ ಆಗಿನಿಂದಲೂ ಪುಷ್ಪಮಾಲಿನಿಯ ಮೇಲಿದ್ದ ಅವನ ಪ್ರೇಮವಾತ್ಸಲ್ಯಾದಿಗಳು ಅದೃಶ್ಯವಾದವು. ಆದಾಗ್ಯೂ ಆಕೆಗೆ ಪತ್ರಗಳನ್ನು ಬರೆಯುತ್ತಿದ್ದನು. ಆ ಪತ್ರಗಳಾದರೋ ಒಂದುವಿಧವಾದ ನಿರ್ದಯ, ನಿರ್ದಾಕ್ಷಿಣ್ಯಗಳನ್ನು ಸೂಚಿಸಿ ಹೃದಯವೇದಕಗಳಾಗಿರುತ್ತಿದ್ದವು. ಪುಷ್ಪಮಾಲಿನಿಯು ಇವುಗಳನ್ನು ಓದುತ್ತಿರುವಾಗ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿದುಹೋಗುತ್ತಿದ್ದಿತು. ಕಠಿಣೋಕ್ತಿಗಳಿಂದಡಗಿರುವ ಪತ್ರವು ಕ್ಲೇಶದಾಯಕವಾಗಿದ್ದಾಗ್ಯೂ ತನ್ನ ಪ್ರಿಯನಿಗೆ ಅಕಸ್ಮಾತ್ತಾಗಿ ಒದಗಿದ ವಿಪತ್ತಿಗಾಗಿ ದುಃಖಿಸುತ್ತಾ ನನ್ನ ಪ್ರಿಯನೇ! ಇಷ್ಟು ಬೇಗನೆ ನಮ್ಮಿರ್ವರ ಆಲೋಚನೆಗಳೂ ಉದ್ದಿಶ್ಯಗಳೂ ಸ್ವಪ್ನದಂತಾಗುತ್ತವೆಂದು ನಾನು ನೆನಸಿರಲಿಲ್ಲವಲ್ಲಾ! ನಿನಗೆ ಸ್ವಸ್ಥಬುದ್ಧಿ ಇರುತ್ತಿದ್ದರೆ ಇಂತಹ ಕಠಿಣೋಕ್ತಿಗಳನ್ನು ಉಪಯೋಗಿಸುತ್ತಿದ್ದಿಯಾ? ನಿನ್ನ ಮೃದುಮಧುರವಾದ ಮಾತುಗಳನ್ನು ಮತ್ತೊಂದಾವರ್ತಿ ಕೇಳುವ ಪುಣ್ಯವು ನನಗೆ ಲಭಿಸೀತೇ? ಇಂತಹ ಪರಿತಾಪಕರವಾದ ಸ್ಥಿತಿಯಲ್ಲಿರುವ ನಿನ್ನ ಬಳಿಗೆ ಬಂದು ನಿನ್ನನ್ನು ಉಪಚರಿಸಲೇ? ನಿನ್ನ ರೋಗಪರಿಹಾರಕ್ಕಾಗಿ ಪ್ರಯತ್ನಿಸಲೇ? ತಂದೆಯಾಜ್ಞೆಯಿಂದ ಬಂಧಿಸಲ್ಪಟ್ಟಿದ್ದೇನೆ. ಏನು ಮಾಡಲಿ? ನಿನ್ನ ನಿಟ್ಟುಸಿರುಗಳು ವಿಷಮಯವಾದ ಅನಿಲಗಳಾಗಿ ನನ್ನನ್ನು

ದಹಿಸುತ್ತಿವೆಯಲ್ಲಾ! ಎಂದು ಆಹಾರವಿಹಾರಗಳಲ್ಲಿ ಮನಸ್ಸಿಲ್ಲದವಳಾಗಿ ತನ್ನ ಮನೋವ್ಯಾಕುಲತೆಯನ್ನು ಒಬ್ಬರಿಗಾದರೂ ಪ್ರಕಟಿಸದೆ ಕೊರಗುತ್ತಿದ್ದಳು.

ಒಂದು ದಿನ ಪುಷ್ಪಮಾಲಿನಿಯು ತನ್ನ ಕೊಠಡಿಯಲ್ಲಿ ಒಂಟಿಯಾಗಿ ಕುಳಿತು ತನ್ನ ಪ್ರಿಯನಾದ ಯುವರಾಜನ ವಿಷಯದಲ್ಲಿ ಚಿಂತಿಸುತ್ತಾ ಇರುವಾಗ, ಸನ್ತ್ರಾಪಕನು ಕೊಠಡಿಯ ಬಾಗಿಲನ್ನು ರಭಸದಿಂದ ತೆರೆದು ಒಳಗೆ ನುಗ್ಗಿದನು. ಚಂದ್ರಶೇಖರರಾಯನ ಮರಣಾನಂತರ ಒಬ್ಬರಿಗೊಬ್ಬರಿಗೆ ದರ್ಶನವೇ ಇಲ್ಲ. ನಿಷ್ಠುರ, ನಿರ್ದಾಕ್ಷಿಣ್ಯ, ಕಠಿಣೋಕ್ತಿಗಳಿಂದೊಳಗೊಂಡ ಕಾಗದಪತ್ರಗಳನ್ನು ಮಾತ್ರ ಸನ್ತ್ರಾಪಕನು ಪುಷ್ಪಮಾಲಿನಿಗೆ ಬರೆಯುತ್ತಿದ್ದನು. ಪುಷ್ಪಮಾಲಿನಿಯು ತಂದೆಯಾಜ್ಞೆಗೊಳಗಾಗಿ ಯಾವುದಕ್ಕೂ ಪ್ರತ್ಯುತ್ತರವನ್ನು ಕೊಡದೆ ಚಿಂತಿಸುತ್ತಿದ್ದಳು. ಆ ದಿನ ಅಕಸ್ಮಾತ್ತಾಗಿ ತನ್ನ ಕಣ್ಣೆದುರಿನಲ್ಲಿ ನಿಂತಿರುವ ಸನ್ತ್ರಾಪಕನನ್ನು ನೋಡಿ ಆಶ್ಚರ್ಯಪಟ್ಟಳು. ತನ್ನ ಪ್ರಿಯನ ಗುರುತೇ ಅವಳಿಗೆ ಸಿಕ್ಕಲಿಲ್ಲ. ತಲೆಯ ಕೂದಲು ಕೆದರಿಹೋಗಿದ್ದವು. ಕಣ್ಣುಗಳು ಕೆಂಪೇರಿದ್ದವು. ಸುಂದರವಾದ ಮುಖದಮೇಲೆಲ್ಲಾ ಕೂದಲು ವಿಶೇಷವಾಗಿ ಬೆಳೆದಿದ್ದವು. ಮೈಮೇಲೆ ಹರಕುಬಟ್ಟೆಗಳು. ಪಾದಗಳಿಗೆ ರಕ್ಷೆಗಳಿಲ್ಲ. ತೊದಲುಮಾತುಗಳು. ಆ ಮಾತುಗಳಲ್ಲಿ ಮೃದುತ್ವವೇ ಇಲ್ಲ. ಪುಷ್ಪಮಾಲಿನಿಗೆ ತನ್ನ ಪ್ರಿಯನ ಮೇಲೆ ಎಷ್ಟು ಪ್ರೇಮವಾತ್ಸಲ್ಯಗಳಿದ್ದಾಗ್ಯೂ ಇಂತಹ ಸ್ಥಿತಿಯಲ್ಲಿರುವವನೊಂದಿಗೆ ಮಾತಾಡುವುದು ತಾನೆ ಏನು? ಬಾಯಿಯು ಬಂಧಿಸಲ್ಪಟ್ಟಿತು. ಪ್ರಿಯನ ಪರಿತಾಪಕರವಾದ ಸ್ಥಿತಿಯನ್ನು ನೋಡಿದ ಕಣ್ಣುಗಳಿಂದ ನೀರು ಮಾತ್ರ ದಳದಳನೆ ಹರಿಯಲಾರಂಭಿಸಿತು. ಪ್ರಿಯನ ಎದುರಿನಲ್ಲಿ ಸ್ತಂಭದಂತೆ ನಿಂತುಬಿಟ್ಟಳು.

ಸನ್ತ್ಯಾಪಕನಾದರೋ ನಿಜವಾದ ಹುಚ್ಚನಂತೆ ತನ್ನ ಮನಸ್ಸಿಗೆ ಬಂದಂತೆ ಮಾತಾಡಿಕೊಂಡು ಹೇಗೆಬಂದನೋ ಹಾಗೆಯೇ ಹೊರಟು ಹೋದನು. ಇವನು ಹೋದ ತರುವಾಯ ಪುಷ್ಪಮಾಲಿನಿಗೆ ಹೂದೋಟದ ಪ್ರೇಮಭಾಷಣಗಳೂ, ಪತ್ರಗಳೂ, ವಸ್ತ್ರಾಭರಣಗಳ ಬಹುಮಾನಗಳೂ ನೆನಪಿಗೆ ಬಂದು ಅಕಟಾ! ನಮ್ಮಿರ್ವರ ಅಭ್ಯುದಯವು ಸಮಾಪ್ತವಾಯಿತೇ? ಯುವರಾಜನು ನನ್ನನ್ನು ಪ್ರೀತಿಸುವ ಲಕ್ಷಣವೇ ಕಾಣುವುದಿಲ್ಲವಲ್ಲಾ! ಎಂದು ಚಿಂತಿಸುತ್ತಿದ್ದಳು.

ಸನ್ತ್ಯಾಪಕನು ಕೈಗೊಂಡಿರುವ ಕಾರ್ಯವಾದರೋ ಭಯಂಕರವಾದುದು. ದಿವಾರಾತ್ರಿಗಳಲ್ಲಿಯೂ ಪಿತೃಭೂತಕ್ಕೆ ಕೊಟ್ಟ ಭಾಷೆಯನ್ನು ಹೇಗೆ ನೆರವೇರಿಸಬೇಕೆಂಬ ಯೋಚನೆಯೇ ಹೊರತು ಮತ್ತೊಂದು ಯೋಚನೆಯೇ ಇಲ್ಲ. ಆದಾಗ್ಯೂ ಮಳೆಗಾಲದ ಕಾರ್ಗತ್ತಲಿನಲ್ಲಿ ಆಗಿಂದಾಗ್ಗೆ ಮಿಂಚು ಹೊಳೆಯುವಂತೆ ತನ್ನ ಪ್ರಿಯಳಾದ ಪುಷ್ಪಮಾಲನಿಯ ನೆನಪು ಉಂಟಾಗುತ್ತಿದ್ದಿತು. ಒಂದು ದಿನ ಇಂತಹ ನೆನಪು ಉಂಟಾದಾಗ ಒಂದು ಪತ್ರವನ್ನು ಬರೆದು ಪುಷ್ಪಮಾಲಿನಿಗೆ ಕಳುಹಿಸಿದನು. ಆಕೆಯು ಆ ಪತ್ರವನ್ನು ಓದಿಕೊಂಡು ತನ್ನ ತಂದೆಗೆ ತೋರಿಸಬೇಕೆಂದು ತನ್ನ ಕೊಠಡಿಯಿಂದ ಹೊರಡುವಷ್ಟರಲ್ಲಿಯೇ ತಂದೆಯು ತಾನಾಗಿ ಅಲ್ಲಿಗೆ ಬಂದುದರಿಂದ ಆ ಪತ್ರವನ್ನು ಆತನ ಕೈಗೆ ಕೊಟ್ಟಳು. ಇದನ್ನು ತಂದೆಯಾದ ಕುತಂತ್ರಿಕರಾಯನು ಓದಿಕೊಂಡು ತನ್ನ ಮನಸ್ಸಿನಲ್ಲಿ—"ಯುವರಾಜನ ಬುದ್ಧಿವಿಭ್ರಮಣೆಗೆ ತನ್ನ ಪುತ್ರಿಯಮೇಲಿರುವ ಪ್ರೇಮವೇ ಕಾರಣವೆಂದು ತಿಳಿದಂತಾಯಿತು. ಯುವರಾಜನು ನನ್ನ ಮಗಳನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತಾನೆಂಬುವುದಕ್ಕೆ ಲೇಶಾಂಶವೂ ಸಂದೇಹವಿಲ್ಲ" ಎಂದು ಅಂದುಕೊಂಡು, ಮಗಳನ್ನು ನೋಡಿ—ಮಗಳೇ, ನೀನು

ಹೇಳಿದಂತೆ ಯುವರಾಜನು ನಿನ್ನನ್ನು ಪ್ರೀತಿಸುವುದು ನಿಜ. ನೀನು ಆತನ ಪತ್ನಿಯಾಗಿ ಒಂದಾನೊಂದುದಿನ ಈ ರಾಜ್ಯಕ್ಕೆ ಮಹಾರಾಣಿ ಯಾಗುವುದು ನಿಜ. ನಾನು ಮಹಾರಾಣಿಯ ತಂದೆ ಎನಿಸಿ ಕೊಳ್ಳುವುದು ಸಹ ಇನ್ನೂ ಖಂಡಿತ. ನನ್ನ ಆಜ್ಞೆಗೆ ಒಳಗಾಗಿ ನೀನು ಯುವರಾಜನಿಗೆ ನಿನ್ನ ಪ್ರೀತಿಯನ್ನು ಹೊರಪಡಿಸದಿದ್ದುದೇ ಆತನಿಗೆ ಉಂಟಾಗಿರುವ ರೋಗಕ್ಕೆ ನಿಜವಾದ ಕಾರಣವೆಂಬುದು ನಿಸ್ಸಂಶಯವಾಗಿದೆ. ನೀನು ನನ್ನ ಸುಪುತ್ರಿ. ತಂದೆಯಾದ ನನ್ನ ಆಜ್ಞೆಗೆ ವಿಧೇಯಳಾಗಿದ್ದುದರಿಂದಲೇ ಮಹಾರಾಣಿಯ ಸ್ಥಾನಕ್ಕೆ ಯೋಗ್ಯಳಾದಿ. ಇನ್ನು ನಾನು ತಡಮಾಡಬಾರದು. "ಆಲಸ್ಯ ದಿಂದ ಅಮೃತವು ಸಹ ವಿಷವಾಗುವುದು." ನಾನು ಈಗಲೇ ಹೋಗಿ ಮಹಾರಾಜನಿಗೂ ಮಹಾರಾಣಿಗೂ ಈ ನಿಮ್ಮಿಬ್ಬರ ಸಂಗತಿಯನ್ನು ತಿಳಿಸಿ ವಿವಾಹದ ಏರ್ಪಾಡನ್ನು ಮಾಡುತ್ತೇನೆ. ಅಲ್ಲದೆ ಈ ದಿನ ಹತ್ತು ಘಂಟೆಗೆ ಅರಮನೆಗೆ ಬರಬೇಕೆಂದು ರಾಜಾಜ್ಞೆಯೂ ಆಗಿದೆ. ನಾನು ಹೋಗಿಬರುತ್ತೇನೆ. ನೀನು ಸಂತೋಷಚಿತ್ತಳಾಗಿರು ಎಂದು ಹೇಳಿ ಯುವರಾಜನ ಪತ್ರವನ್ನು ತೆಗೆದುಕೊಂಡು ಅವಸರದಿಂದ ಅರಮನೆಗೆ ಹೋದನು.

ದ್ವಾರಪಾಲಕ—ಮಹಾಪ್ರಭೂ ! ಮಂತ್ರಿಶ್ರೇಷ್ಠರು ದಯ ಮಾಡಿಸಿದ್ದಾರೆ.

ಮಹಾರಾಜ—ಒಳಗೆ ಬರಹೇಳು.

ಮಂತ್ರಿ—ಮಹಾಸ್ವಾಮಿಾ! ಪ್ರಭುಗಳು ಸೇವಕನನ್ನು ಕರೆಸಿದ ಕಾರಣವನ್ನರಿಯಬಹುದೇ ?

ಮಹಾರಾಣಿ—ಮಂತ್ರಿವರ್ಯಾ, ನೀನು ಮೊದಲಿನಿಂದಲೂ ನಮಗೆ ಆಪ್ತನಾಗಿದ್ದೀ. ನಮ್ಮ ಕಷ್ಟದುಃಖಗಳನ್ನು ನೀಗಿಸುವ

ಶಕ್ತಿಯು ನಿನ್ನಲ್ಲಿದೆ. ಕೆಲವು ದಿನಗಳಿಂದಲೂ ನನ್ನ ಸುಪುತ್ರನಾದ ಸನ್ತಾಪಕನು ಆಹಾರವಿಹಾರಗಳನ್ನು ತೊರೆದು ಬುದ್ಧಿಭ್ರಮಣೆ ಹೊಂದಿದ್ದಾನೆ. ಎಲ್ಲಾ ತರಹೆಯ ಚಿಕಿತ್ಸೆಗಳು ನಿಷ್ಫಲವಾದುವು. ನಮ್ಮ ಪುತ್ರನು ಇಂತಹ ಸ್ಥಿತಿಯಲ್ಲಿರಲು ಕಾರಣವನ್ನು ಊಹಿಸಿ ತಿಳಿಯಲು ನಮ್ಮಿಂದಾಗದ ಕಾರ್ಯವಾಗಿದೆ. ಆದರೂ ನಾನೇನೋ ಒಂದು ಕಾರಣವನ್ನು ಊಹಿಸಿದ್ದೇನೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿಯಲು ಅಪೇಕ್ಷೆ ಇದೆ. ಇದಕ್ಕಾಗಿಯೇ ನಿನ್ನನ್ನು ಕರೆಸಿದುದು ಎಂದು ಹೇಳಿದಳು. ಆಗ ಕುತಂತ್ರಿಕನು— ಮಹಾರಾಣೀ! ನಿಮ್ಮ ಸುಕುಮಾರನು ಆಹಾರವಿಹಾರಗಳನ್ನು ತೊರೆದು ಹುಚ್ಚನಾಗಿರುವುದು ನಿಜ. ಎಲ್ಲಾ ತರವಾದ ಚಿಕಿತ್ಸೆಗಳೂ ನಿಷ್ಫಲವಾದುದೇನೂ ಆಶ್ಚರ್ಯವಲ್ಲ. ಹಾಗಾದುದಕ್ಕೆ ಕಾರಣ ವನ್ನು ತಿಳಿಯಲು ನನ್ನ ಹೊರತು ಮತ್ತಾರಿಂದಲೂ ಸಾಧ್ಯವಲ್ಲ.

ಮಹಾರಾಣಿ—ಏನು? ನಿನ್ನ ಹೊರತು ಯಾರಿಂದಲೂ ಸಾಧ್ಯವಲ್ಲವೇ?

ಕುತಂತ್ರಿಕ—ಖಂಡಿತವಾಗಿಯೂ ಸಾಧ್ಯವಲ್ಲ.

ಮಹಾರಾಣಿ—ಹಾಗಾದರೆ ಮೊದಲೇ ನೀನು ನಮಗೇಕೆ ತಿಳಿಸಲಿಲ್ಲ?

ಕುತಂತ್ರಿಕ—ಕಾಲಸಂದರ್ಭಗಳಿಗಾಗಿ ನಿರೀಕ್ಷಿಸುತ್ತಿದ್ದೆನು. ಒಂದು ಕಾರ್ಯದ ಯಥಾರ್ಥತ್ವವನ್ನು ತಿಳಿಯದೆ ದುಡುಕುವುದ ರಿಂದ ಪ್ರಯೋಜನವೇನೂ ಇಲ್ಲ.

ಮಹಾರಾಣಿ—ಈಗ ಆ ಕಾರ್ಯದ ಯಥಾರ್ಥತ್ವವು ತಿಳಿ ಯಿತೇ? ಆ ಕಾರಣವೇನು?

ಕುತಂತ್ರಿಕ—ಆ ಕಾರಣವು ನನ್ನ ಮಗಳೇ. ಇದನ್ನು ದೃಢ ಪಡಿಸಲು ನನ್ನಲ್ಲಿ ಒಂದು ಪತ್ರವಿದೆ, ಅದನ್ನು ಓದುತ್ತೇನೆ, ಚಿತ್ತವಿಟ್ಟು ಲಾಲಿಸಿರಿ :

"ನನ್ನ ಪ್ರಿಯೇ ! ನನ್ನ ಪ್ರಾಣಪದಕವೇ ! ನನ್ನ ಪುಷ್ಪ ಮಾಲಿಕೆಯೇ ! ನಿನ್ನನ್ನು ನನ್ನ ಕಂಠದಲ್ಲಿ ಯಾವಾಗ ಧರಿಸುವೆನೋ ತಿಳಿಯದಲ್ಲಕಟಾ ! ಆಕಾಶದಲ್ಲಿ ಥಳಥಳಿಸುವ ನಕ್ಷತ್ರಗಳು ಬೆಂಕಿಯ ಕಿಡಿಗಳಹುದೋ ಅಲ್ಲವೋ ಎಂದು ನೀನುಸಂಶಯಪಟ್ಟರೂ ಪಡಬಹುದು. ಸೂರ್ಯನು ಭೂಪ್ರದಕ್ಷಿಣೆಯನ್ನು ಮಾಡುತ್ತಾನೋ ಅಥವ ಭೂಮಿಯೇ ಸೂರ್ಯನ ಪ್ರದಕ್ಷಿಣೆ ಮಾಡುತ್ತದೋ ಎಂಬ ವಿಷಯದಲ್ಲಿ ನೀನು ಸಂಶಯಪಟ್ಟರೂ ಪಡಬಹುದು. ಒಬ್ಬನು ಸತ್ಯಸಂಧನಾಗಿದ್ದರೂ ಅವನು ಹೇಳುವುದೆಲ್ಲಾ ನಿಜವೋ ಸಟೆಯೋ ಎಂದು ನೀನು ಸಂಶಯಪಟ್ಟರೂ ಪಡಬಹುದು. ಆದರೆ, ನಾನು ನಿನ್ನನ್ನು ಪ್ರೀತಿಸುತ್ತೇನೆಂಬುವುದರ ವಿಷಯದಲ್ಲಿ ನೀನು ಎಂದಿಗೂ ಸಂಶಯಪಡದಿರು. ಹಾ! ನನ್ನ ಪುಷ್ಪಮಾಲಿಕಾ, ನಿನ್ನ ವಿಷಯ ದಲ್ಲಿ ನನಗಿರುವ ಮನೋವ್ಯಥೆಯನ್ನು ಯಾರಿಗುಸರಲಿ, ನನಗೆ ನಿಮ್ಮ ಮೇಲಿರುವ ಪ್ರೇಮವನ್ನು ಸ್ಪಷ್ಟಪಡಿಸಲು ನನಗೆ ಸಾಧ್ಯ ವಾಗದ ಕಾರ್ಯವಾಗಿದೆ. ನನ್ನ ಕಾಂತಾಮಣಿಯೇ, ನನ್ನ ಮನೋ ರಮಾ, ನಾನು ನಿನ್ನ ವಿಷಯ ನೆನಸದ ಒಂದು ಘಳಿಗೆಯಾದರೂ ಇಲ್ಲ. ನಾನು ಏನೋ ಬರೆದೆನೆಂದು ಅಲಕ್ಷ್ಯಮಾಡದೆ ನನ್ನನ್ನು ಸಂಪೂರ್ಣವಾಗಿ ನಂಬು, ನಂಬು, ನಂಬು. ನಿನಗೆ ನನ್ನ ಪ್ರೇಮಾ ಲಿಂಗನ. ಹೀಗೆ ನಿನ್ನ ಪ್ರಿಯನಾದ ಸನ್ತಾಪಕ.

ಮಹಾರಾಣೀ, ಈ ಪತ್ರದಿಂದ ನಿಮ್ಮ ಸುಕುಮಾರನ ಬುದ್ಧಿ ಭ್ರಮಣೆಗೆ ಕಾರಣವು ತಿಳಿಯಿತೇ ? ಸೇವಕನಾದ ನಾನು ಇದ್ದ

ಸಂಗತಿಯನ್ನು ಅರಿಕೆಮಾಡಿಕೊಂಡಿದ್ದೇನೆ. ಇದರಮೇಲೆ ತಮ್ಮ ಚಿತ್ತಕ್ಕೆ ತೋರಿದಂತೆ ಮಾಡಬಹುದು. ಆವರೂ ಕಾರ್ಯಾಲಸ್ಯ ದಿಂದ ಯುವರಾಜನಿಗೆ ಕೆಡಕೂ ತಮಗೆ ದುಃಖವೂ ಪ್ರಾಪ್ತಿಸಲು ಯಾವ ಸಂಶಯವೂ ಇಲ್ಲ. ಅಪ್ಪಣೆಯಾದರೆ ವಿವಾಹಕಾರ್ಯಗಳಿಗೆ ಸಕಲವನ್ನೂ ಅಣಿಮಾಡುತ್ತೇನೆ ಎಂದು ಹೇಳಿ ಸುಮ್ಮನಾದನು.

ಮಹಾರಾಣಿ—(ಪತಿಯಾದ ಭುಜಂಗಮನ ಕಡೆಗೆ ನೋಡಿ) ಪ್ರಿಯಾ, ಸಂಗತಿಯು ಈಗಲಾದರೂ ಸ್ಪಷ್ಟವಾಯಿತೇ? ನಾನು ಈ ಮೊದಲೇ ನಿಮಗೆ ಹೇಳಿರಲಿಲ್ಲವೇ? ನನ್ನ ಕಂದನಿಗೆ ವಿಶೇಷ ಗಂಡಾಂತರವೂ ಪ್ರಾಣಾಪಾಯವೂ ಆಗಿ ಅದರಿಂದ ನಾನು ದುಃಖ ಕ್ಕೊಳಗಾಗದಂತೆ ವಿವಾಹಕಾರ್ಯಗಳಿಗೆ ಅಪ್ಪಣೆಯನ್ನು ಕೊಡಿರಿ ಎಂದು ಹೇಳಿದಳು.

---

# ಅಧ್ಯಾಯ 5

---

## ಕಪಟನಾಟಕ ಪ್ರದರ್ಶನ.

"ತಾನು ತೋಡಿದ ಕುಳಿಯಲ್ಲಿ ತಾನೇ ಬಿದ್ದನು" ಎಂಬ ಲೋಕೋಕ್ತಿಗನುಸಾರವಾಗಿ ಸನ್ತ್ಯಾಪಕನನ್ನೂ ಈತನ ತಂದೆಯನ್ನೂ ಮೋಸಗೊಳಿಸಿದ ಭುಜಂಗಮನೂ ಕಪಟಾಪತಿಯೂ ಸನ್ತ್ಯಾಪಕನ ವಿಷಯದಲ್ಲ ತಾವೇ ಸಂಪೂರ್ಣವಾಗಿ ಮೋಸಹೋದರೆಂದು ತಿಳಿಯ ಬೇಕಾಗಿದೆ. ಇತ್ತ ಸನ್ತ್ಯಾಪಕನ ದುಃಖವಾದರೋ ದಿನದಿಂದ ದಿನಕ್ಕೆ ವೃದ್ಧಿಯಾಗುತ್ತಿದ್ದಿತೇ ಹೊರ್ತು ಯಾವ ವಿಷಯದಲ್ಲಿ ಯಾಗಲೀ ಕಡಿಮೆಯೇ ಆಗಲಿಲ್ಲ. ಮಾಡುವುದೇನು? ಅಂದು ತಾನು ನೋಡಿದ ಪಿತೃಭೂತವು ತನ್ನೆದುರಿನಲ್ಲಿಯೇ ಸುಳಿದಾಡುತ್ತಾ ಕುಮಾರಾ! ನೀನು ನನಗೆ ಮಾಡಿದ ವಾಗ್ದಾನವನ್ನು ಮರೆತೆಯಾ? ನಿರಪರಾಧಿಯಾದ ನಿನ್ನ ತಂದೆಯನ್ನು ಕೊಲೆಮಾಡಿದ ವಿಶ್ವಾಸ ಘಾತುಕನಾದ ಆ ಭುಜಂಗಮನ ಪ್ರಾಣವನ್ನು ಇನ್ನೆಷ್ಟು ದಿನಗಳು ಉಳಿಸಬೇಕೆಂದು ಯೋಚಿಸುತ್ತಿದ್ದೀ? ಎಂದು ಕೇಳುತ್ತದೆಯೋ ಎಂಬಂತಿದ್ದಿತು. ಇದರಿಂದ ಸನ್ತ್ಯಾಪಕನು ಅವಿಶ್ರಾಂತಿಯುಳ್ಳವ ನಾಗಿ, ತನ್ನ ಮನದಲ್ಲಿ—"ನನ್ನ ಚಿಕ್ಕಪ್ಪನಾದ ಭುಜಂಗಮನ ವಿಷಯ ನನ್ನ ಪಿತೃಭೂತಕ್ಕೆ ಮಾಡಿದ ವಾಗ್ದಾನವನ್ನು ಯಾವಾಗ ನೆರವೇರಿಸಲಿ? ಪ್ರತಿಯೊಂದು ಘಳಿಗೆಯೂ ಒಂದು ಯುಗದೋಪಾದಿ ಯಲ್ಲಿದೆಯಲ್ಲಾ! ಆ ನೀಚನಾದ ಭುಜಂಗಮನನ್ನು ಹೇಗೆ ಕೊಲ್ಲಲಿ? ಕೊಲ್ಲುವುದು ಅಂದರೆ ಸಾಮಾನ್ಯವಾದ ಕಾರ್ಯವಲ್ಲ. ಹಗಲಿನಲ್ಲಿ ಆತನ ಬೆಂಗಾವಲಿಗಾಗಿ ಯಾವಾಗಲೂ ಸಿಪಾಯಿಗಳು ಇದ್ದೇ ಇರು ವರು. ರಾತ್ರಿಯ ಹೊತ್ತಾದರೂ ನನ್ನ ಕಾರ್ಯ ಪೂರ್ತಿಗೊಳಿ

ಸೋಣವೆಂವರೆ ನನ್ನ ತಾಯಿಯು ಜೊತೆಯಲ್ಲಿಯೇ ಇರುವಳು. ಇದಲ್ಲದೆ ಭುಜಂಗಮನು ನನ್ನ ತಂದೆಯ ಸಹೋದರನು ಮತ್ತು ನನ್ನ ತಾಯಿಯ ಪತಿಯು. ಇಂತಹವನನ್ನು ಕೊಲ್ಲಲು ನನ್ನ ಮನ ವೊಡಂಬಡುವುದಿಲ್ಲವಲ್ಲಾ! ಭೂತದ ಮಾತನ್ನು ನಂಬಲು ನನಗೆ ಆಧಾರವೇನು ? ಅದು ನನ್ನ ತಂದೆಯ ಭೂತವೇ ಎಂಬುವುದನ್ನು ಹೇಗೆ ತಿಳಿಯಲಿ ? ಅದು ದೆಸ್ವವಾಗಿದ್ದಿರಬಹುದು. ಯಾವ ರೂಪ ವನ್ನಾದರೂ ಧರಿಸಲು ಅದಕ್ಕೆ ಶಕ್ತಿಯುದೆಯಷ್ಟೆ. ಯಾವುದೋ ಒಂದು ದುರುದ್ದೇಶದಿಂದ ನನ್ನ ತಂದೆಯ ರೂಪವನ್ನು ಧರಿಸಿ ನನಗೆ ಕಾಣಿಸಿರಬಾರದೇಕೆ ? ಇದರ ಯಥಾರ್ಥತ್ವವನ್ನು ತಿಳಿಯದೆ ನಾನು ನರಹತ್ಯಮಾಡಬಹುದೇ ? ಜತೆ ಸೃಷ್ಟಿಯನ್ನು ಕೊಲ್ಲುವುದು ಪಾಪ ಗಳಲ್ಲಿಲ್ಲಾ ಭಯಂಕರವಾದ ಪಾಪವಲ್ಲವೇ ? ಯುಕ್ತಾಯುಕ್ತ, ಪಾಪಪುಣ್ಯಗಳ ಭೇದಾಭೇದಗಳನ್ನು ತಿಳಿದಿರುವ ನಾನು ಇಂತಹ ಕ್ರೂರಕೃತ್ಯವನ್ನು ಮಾಡುವುದೆಂತು ? ವಿಚಾರಶೂನ್ಯನಾಗಿ ಆತುರ ದಿಂದ ಕೆಲಸವನ್ನು ನಡೆಸಿದರೆ ಕೊಲೆಪಾತಕನಾದ ನನಗೆ ಮಹಾ ನರಕ ಪ್ರಾಪ್ತವಾಗುವುದಕ್ಕೆ ಸಂಶಯವೇ ಇಲ್ಲ" ಎಂದು ಯೋಚಿ ಸುತ್ತಾ ಯಾವುದನ್ನು ಮಾಡುವುದಕ್ಕೂ ಯತ್ನವಿಲ್ಲದವನಾಗಿ, ಕಾರ್ಯದ ಯಥಾರ್ಥತ್ವವನ್ನು ಮತ್ತಷ್ಟು ಚೆನ್ನಾಗಿ ಪರಿಶೋಧಿ ಸಲು ಅಪೇಕ್ಷೆಯುಳ್ಳವನಾದನು.

ಈತನು ಮನಸ್ಸಿನಲ್ಲಿ ಇಂತಹ ಗಲಿಬಿಲಿಯುಳ್ಳವನಾಗಿರುವಾಗ ಆ ಪಟ್ಟಣಕ್ಕೆ ಒಂದು ನಾಟಕ ಮಂಡಲಿಯು ಬಂದಿತು. ಆ ಮಂಡಲಿಯ ಯಜಮಾನನು ಅರಮನೆಗೆ ಬಂದು, ರಾಜಸಭೆಯವರ ಎದುರಿನಲ್ಲಿ ಕೆಲವು ನಾಟಕಗಳನ್ನು ಪ್ರದರ್ಶಿಸಲು ಅಪ್ಪಣೆಯನ್ನು ಕೇಳಿದನು. ತಂದೆಯ ಮರಣಕ್ಕೆ ಮುಂಚೆ ಸನ್ನಾಪಕನು ಇಂತಹ

ನಾಟಕಗಳನ್ನು ನೋಡಿ ಸಂತೋಷಿಸುವುದರಲ್ಲಿ ಕುತೂಹಲವುಳ್ಳವನಾಗಿದ್ದನು. ಇವರು ಆಗಾಗ್ಗೆ ಈ ನಗರಕ್ಕೆ ಬರುವ ವಾಡಿಕೆಯಾಗಿದ್ದಿತು. ಇವರು ಹಿಂದೆ ಪ್ರದರ್ಶಿಸಿದ ನಾಟಕಗಳಲ್ಲೆಲ್ಲಾ ಒಂದು ನಾಟಕವು ಬಹು ಶೋಕರಸಭರಿತವಾಗಿದ್ದಿತು. ಈ ನಾಟಕವು ಸಸ್ಥಾಪಕನಿಗೆ ಬಹು ಪ್ರಿಯವಾಗಿದ್ದಿತಾದುದರಿಂದ ಅವರನ್ನು ಕರೆಸಿ ಆ ನಾಟಕವನ್ನು ಮತ್ತೊಂದಾವರ್ತಿ ಪ್ರದರ್ಶಿಸಲು ಹೇಳಿದನು. ಅವರು ಸಸ್ಥಾಪಕನ ಅಪ್ಪಣೆಯಂತೆ ಆ ರಾತ್ರೆ ಆ ನಾಟಕವನ್ನು ಅಭಿನಯಿಸಿದರು.

ಕಥಾಸಾರಾಂಶವು—ಮೇರುಪುರದ ಅರಸನಾದ ಗುಣನಿಧಿರಾಯನನ್ನು ಶತ್ರುಗಳು ಬಹು ಕ್ರೂರವಾಗಿ ಕೊಲೆಮಾಡಿ ಪ್ರಜೆಗಳೆಲ್ಲರನ್ನೂ ನಾಶಮಾಡಿದುದಲ್ಲದೆ ಇಡೀ ಪಟ್ಟಣವನ್ನೆಲ್ಲಾ ಸುಟ್ಟು ಬೂದಿಮಾಡಿದುದು. ತನ್ನ ಪತಿಗೂ, ಪ್ರಜೆಗಳಿಗೂ, ಪಟ್ಟಣಕ್ಕೂ ಉಂಟಾದ ದುಸ್ಥಿತಿಯನ್ನು ನೋಡಿ ಸಹಿಸಲಾರದೆ ಮಹಾರಾಣಿಯಾದ ಚಂದ್ರವದನೆಯು ಕಲ್ಮರಗಳು ಸಹ ಕರಗಿ ನೀರಾಗುವಂತೆ ಅತಿಯಾಗಿ ಗೋಳಾಡುವುದು.

ಇಂತಹ ಪರಿತಾಪಕರವಾದ ನೋಟವನ್ನು ನೋಡುತ್ತಿದ್ದ ನೋಟಕರ ಕಣ್ಣುಗಳಿಂದ ನೀರು ದಳದಳನೆ ಹರಿಯಲಾರಂಭಿಸಿತು. ಹೇಳುವುದೇನಿದೆ ? ಈ ಕಥೆಯು ಬಹು ಪುರಾತನವಾದುದಾದರೂ ಪಾತ್ರವಹಿಸಿದವರ ಶಕ್ತಿ ಸಾಮರ್ಥ್ಯಗಳಿಂದಲೂ ಅವರ ಅಭಿನಯದಿಂದಲೂ ನೋಟಕರಿಗೆ ಎಲ್ಲವೂ ನಿಜವಾಗಿ ತಮ್ಮ ಕಣ್ಣೆದುರಿನಲ್ಲಿಯೇ ನಡೆಯುವಂತಿದ್ದಿತು. ಮಹಾರಾಣಿಯಾದ ಚಂದ್ರವದನೆಯ ಪಾತ್ರ ವಹಿಸಿದವನಾದರೋ ಆ ಪುರಾತನ ಕಥೆಯ ನೆನಪಿನಿಂದ ಮಾತಾಡಲು ಶಕ್ತಿಯಿಲ್ಲದವನಾದನು, ಧ್ವನಿಯು ತಗ್ಗಿತು,

ಮಾತುಗಳು ತೊದಲಾದವು, ಕಣ್ಣುಗಳಲ್ಲಿ ನೀರು ತುಂಬಿ ಕಡೆಗೆ ದಳದಳನೆ ಹರಿಯಲಾರಂಭಿಸಿತು. ನೋಡುತ್ತಿದ್ದ ನೋಟಕರ ಹೃದಯಗಳು ದುಃಖಭರಿತವಾಗಿ ನಾಟಕಗೃಹವು ನಿಟ್ಟುಸಿರುಗಳಿಂದಲೂ ಹಾಹಾಕಾರಗಳಿಂದಲೂ ತುಂಬಿಹೋಯಿತು.

ಅಭಿನಯಿಸುತ್ತಿದ್ದವರ ಮತ್ತು ನೋಟಕರ ಸ್ಥಿತಿಯನ್ನು ಲಕ್ಷ್ಯವಿಟ್ಟು ನೋಡುತ್ತಾ ಕುಳಿತಿದ್ದ ನಸ್ತಾಪಕನು ತನ್ನ ಮನಸ್ಸಿನಲ್ಲಿ, "ಆಹಾ! ಗುಣಸಿಧಿರಾಯನೂ ಚಂದ್ರವದನೆ ಮಹಾರಾಣಿಯೂ ಅನೇಕಾನೇಕ ವರುಷಗಳ ಹಿಂದೆ ಇದ್ದರೋ ಇಲ್ಲವೋ ತಿಳಿಯದು. ಒಂದುವೇಳೆ ಇದ್ದದ್ದು ನಿಜವಾಗಿದ್ದಾಗ್ಯೂ ಈಗಿನವರು ಅವರನ್ನು ನೋಡಲೇ ಇಲ್ಲ. ಆದರೂ ನೂರಾರು ವರುಷಗಳ ಹಿಂದೆ ಗತಿಸಿಹೋದವರ ನೆನಪಿನಿಂದ ಮಾತ್ರವೇ ಪಾತ್ರವಹಿಸಿದವನಿಗೂ ನೋಟಕರಿಗೂ ಇಷ್ಟು ದುಃಖವಾದರೆ, ಎರಡು ಮೂರು ತಿಂಗಳ ಹಿಂದೆ ಮಹಾರಾಜನಾದ ನನ್ನ ಪ್ರಿಯತಂದೆಯು ಕೊಲೆಯಾದನಲ್ಲಾ ! ನಾನು ಎಷ್ಟು ದುಃಖಿಸಬೇಕಾಗಿದೆ ? ಆದಾಗ್ಯೂ ಆ ವಿಷಯದಲ್ಲಿ ನಾನು ಎಷ್ಟು ಅಲಕ್ಷ್ಯಭಾವದಿಂದ ನನ್ನ ತಂದೆಯ ಮರಣಕ್ಕೆ ಕಾರಣನಾದವನಿಗೆ ಪ್ರತೀಕಾರವನ್ನು ಮಾಡದೆ ಮೈಮರೆತಿದ್ದೇನೆ ? ನನ್ನಂತೆ ಪ್ರಿಯ ತಂದೆಯಮೇಲೆ ಮಮತೆ ಇಲ್ಲವವರು ಲೋಕದಲ್ಲಿ ಯಾರಾದರೂ ಇರಬಹುದೇ" ಎಂಬುದಾಗಿ ನಿಟ್ಟುಸಿರು ಬಿಟ್ಟನು. ಆ ದಿನದ ನಾಟಕದಲ್ಲಿ ಪಾತ್ರವಹಿಸಿದವರ ಅಭಿನಯಾದಿಗಳ ಮತ್ತು ಅದರಿಂದುಂಟಾದ ಪರಿಣಾಮದ ವಿಷಯವನ್ನು ನಸ್ತಾಪಕನು ಯೋಚಿಸುವಾಗ ತಾನು ಅನೇಕ ದಿನಗಳ ಹಿಂದೆ ನೋಡಿದ ಒಂದು ನಾಟಕದ ಕೊಲೆಯ ದೃಶ್ಯದಲ್ಲಿ ಒಬ್ಬ ಕೊಲೆಪಾತಕನು ತಾನು ಮಾಡಿದ ಕೊಲೆಯ ವಿಷಯವಲ್ಲ ಮನೋಪೀಡಿತನಾಗಿ ಬಹಿರಂಗವಾಗಿ ಅರಿಕೆಮಾಡಿದ ಸಂಗತಿಯು ನೆನಪಾಯಿತು.

ಕೂಡಲೇ ಸನ್ತ್ರಾಪಕನು ತನ್ನ ಮನಸ್ಸಿನಲ್ಲಿ—ಭೂತದ ಮಾತು ನಿಜವೋ ಸುಳ್ಳೋ ಎಂದು ಪರೀಕ್ಷಿಸುವುದಕ್ಕೆ ತಕ್ಕ ಸಂದರ್ಭ ದೊರೆಯಿತೆಂದು ಯೋಚಿಸಿ ನಾಟಕ ಮಂಡಲಿಯ ಯಜಮಾನನನ್ನು ಅಂತರಂಗವಾಗಿ ಕರೆಯಿಸಿ—ಅಯ್ಯಾ, "ಧನಂಜಯನ ಸಂಹಾರ" ಎಂಬ ನಾಟಕವನ್ನು ನೀವು ಎಂದಾದರೂ ಪ್ರದರ್ಶಿಸಿದ್ದೀರಾ?

ನಾ|| ಯಜಮಾನನು— ಸ್ವಾಮೀ, ಕಥಾಸಾರಾಂಶವನ್ನು ಸ್ವಲ್ಪಮಟ್ಟಿಗೆ ಸೂಚಿಸಿದ್ದೇ ಆದರೆ ಅರಿಕೆಮಾಡುತ್ತೇನೆ.

ಸನ್ತ್ರಾಪಕ—ಕನಕಪುರವೆಂಬುದೊಂದು ಪಟ್ಟಣವು. ಅದನ್ನು ಧನಂಜಯನೆಂಬೊಬ್ಬ ಅರಸನು ಧರ್ಮದಿಂದ ಆಳುತ್ತಿದ್ದನು. ಅರಸನ ಬಂಧುಗಳಲ್ಲೊಬ್ಬನು ರಾಜ್ಯವನ್ನಪಹರಿಸಲುದ್ದೇಶ್ಯವಾಗಿ ಅರಸನು ತೋಟದಲ್ಲಿ ನಿದ್ರಿಸುತ್ತಿದ್ದಾಗ ವಿಷಪ್ರಯೋಗಮಾಡಿ ಕೊಂದು, ಕೆಲವು ದಿನಗಳಾದ ತರುವಾಯ ಅರಸನ ಪತ್ನಿಯನ್ನೇ ವಿವಾಹಮಾಡಿಕೊಂಡನು.

ನಾ|| ಯಜಮಾನನು— ಮಹಾಸ್ವಾಮಿ, ಸ್ವಲ್ಪ ಮಟ್ಟಿಗೆ ನೆನಪಿದೆ. ಆದಾಗ್ಯೂ ತಮ್ಮ ಅಪ್ಪಣೆಯಾದರೆ ನಾಳೆಯೇ ಅದನ್ನು ಪ್ರದರ್ಶಿಸಲು ಸಿದ್ಧವಾಗಿದ್ದೇವೆ. ಆದರೆ ನಾವು ಮರೆತಿರುವ ಕೆಲವು ಭಾಗಗಳನ್ನು ಮಾತ್ರ ತಾವು ಅಪ್ಪಣೆಕೊಡಿಸಬೇಕು.

ತಕ್ಕ ಸಂದರ್ಭವೊದಗಿತೆಂದು ಸನ್ತ್ರಾಪಕನು ತಾನು ಭೂತದ ಮೂಲಕ ತನ್ನ ತಂದೆಯ ಅಕಾಲಮರಣದ ವಿಷಯವಾಗಿ ಕೇಳಿದ್ದ ಸಂಗತಿಗಳನ್ನು ಕಥಾರೂಪವಾಗಿ ನಾಟಕ ಮಂಡಲಿಯ ಯಜಮಾನನಿಗೆ ಹೇಳಿ ಈ ನಾಟಕವನ್ನು ನಾಳೆಯ ರಾತ್ರೆ ಬಹುಸ್ವಾರಸ್ಯವಾಗಿ ಪ್ರದರ್ಶಿಸಬೇಕೆಂದು ಆಜ್ಞೆಯನ್ನಿತ್ತನು. ಇಷ್ಟರಲ್ಲಿ ಮಿತ್ರನಾದ ಸೌಮಿತ್ರಕನು ಕೊಠಡಿಯೊಳಕ್ಕೆ ಪ್ರವೇಶಿಸಿ, ಯುವರಾಜಾ!

ಈ ದಿನ ಕ್ಷೇಮವೇ ? ನಾಟಕ ಮಂಡಲಿಯ ಯಜಮಾನನು ಬಂದಿದ್ದ ನಲ್ಲಾ, ಸಮಾಚಾರವೇನು ? ಎಂದು ಕೇಳಿದನು. ಅದಕ್ಕೆ ಸನ್ತಾಪಕನು—ಮಿತ್ರನೇ, ಆ ದಿನ ರಾತ್ರಿ ಭೂತವು ನನ್ನ ತಂದೆಯ ಮರಣದ ವಿಷಯ ನನಗೆ ತಿಳಿಸಿದ ಯಾವತ್ತೂ ಸಂಗತಿಯು ನಿನಗೆ ತಿಳಿದೇ ಇದೆಯಷ್ಟೆ. ಇಷ್ಟು ದಿನಗಳಾದಾಗ್ಯೂ ಭುಜಂಗಮನಿಗೆ ಪ್ರತೀಕಾರಮಾಡುವ ವಿಷಯದಲ್ಲಿ ಆ ಭೂತಕ್ಕೆ ನಾನು ಮಾಡಿದ ವಾಗ್ದಾನವನ್ನು ನೆರವೇರಿಸಲು ಕೈಲಾಗದವನಾಗಿ ಉಭಯ ಸಂಕಟ ಕ್ಕೊಳಗಾದವನಾಗಿದ್ದೇನೆ. ಏನುಮಾಡಲಿ ? ಪ್ರತೀಕಾರವೆಂದರೆ ನರಹತ್ಯವೇ. ಭೂತದ ಮಾತು ನಿಜವೋ ಸುಳ್ಳೋ ಹೇಗೆ ತಿಳಿಯಲಿ ? ಈ ವಿಷಯದ ಯಥಾರ್ಥತ್ವವನ್ನು ತಿಳಿದು ಮುಂದಿನ ಕಾರ್ಯ ಮಾಡುವುದೇ ಯುಕ್ತವೆಂದು ತೋರುತ್ತದೆ.

ಸೌಮಿತ್ರಕ—ಯಥಾರ್ಥತ್ವವನ್ನು ತಿಳಿಯುವ ಬಗೆ ಹೇಗೆ ?

ಸನ್ತಾಪಕ—ಆ ದಿನ ಭೂತವು ನನಗೆ ಹೇಳಿದ ಸಂಗತಿಯನ್ನನುಸರಿಸಿ ಈ ಊರಿಗೆ ಬಂದಿರುವ ನಾಟಕ ಮಂಡಲಿಯ ಯಜಮಾನನಿಗೆ ಒಂದು ನಾಟಕವನ್ನು ರಚಿಸಿಕೊಟ್ಟಿದ್ದೇನೆ. ಅವರು ಯಾವ ನಾಟಕವನ್ನಾದರೂ ಪ್ರದರ್ಶಿಸುವುದರಲ್ಲಿ ಬಹು ಸಮರ್ಥರೆಂಬುವ ಸಂಗತಿಯು ನಿನಗೆ ತಿಳಿದೇ ಇದೆ. ಅವರು ಆ ನಾಟಕವನ್ನು ನಾಳೆ ಅಭಿನಯಿಸುವರು. ಆ ನಾಟಕಕ್ಕೆ ಭುಜಂಗಮನನ್ನೂ ನಮ್ಮ ತಾಯಿಯನ್ನೂ ಯಾವುದಾದರೊಂದು ಉಪಾಯದಿಂದ ಬರಮಾಡಿಕೊಳ್ಳುತ್ತೇನೆ. ನಾವಿಬ್ಬರೂ ಸ್ವಲ್ಪ ಮರೆಯಲ್ಲಿ ಕುಳಿತುಕೊಂಡು ಅವರಿಬ್ಬರನ್ನೂ ಲಕ್ಷ್ಯವಿಟ್ಟು ನೋಡುತ್ತಿದ್ದರೆ ಭೂತವು ಹೇಳಿದಂತೆ ಅವರು ಅಪರಾಧಿಗಳೋ, ಅಲ್ಲವೋ ಎಂಬುವುದು ಅವರ ಮುಖಭಾವಗಳಿಂದಲೇ ವ್ಯಕ್ತವಾಗುತ್ತದೆ. ನಾಟಕಾಭಿನಯ

ಕಾಲದಲ್ಲಿ ಅವರ ಮುಖಗಳು ವಿವರ್ಣವಾಗದಿದ್ದರೆ ಭೂತದ ಮಾತುಗಳೆಲ್ಲವೂ ಸಟೆಯೆಂದೇ ತಿಳಿಯಬೇಕು. ಮಿತ್ರಾ, ನೀನು ನಾಳೆ ಬೇಗನೆ ಊಟ ತೀರಿಸಿಕೊಂಡು ಬಾ. ನಾವಿಬ್ಬರೂ ನಮ್ಮ ಉದ್ದಿಶ್ಯವು ನೆರವೇರುವುದಕ್ಕೆ ಅನುಕೂಲವಾದ ಸ್ಥಳವನ್ನು ಏರ್ಪಡಿಸಿಕೊಂಡು ಮೊದಲೇ ಕುಳಿತುಬಿಡೋಣ.

ಸೌಮಿತ್ರಕ—ಯುವರಾಜಾ! ಯಥಾರ್ಥತ್ವವನ್ನು ತಿಳಿಯಲು ಸದುಪಾಯವನ್ನು ಆಲೋಚಿಸಿದಿ. ಖಂಡಿತವಾಗಿ ಬೇಗ ಬರುತ್ತೇನೆ. ನೀನು ಈ ರಾತ್ರೆ ಒಳ್ಳೇ ವಿಶ್ರಾಂತಿಯನ್ನು ಹೊಂದುವವನಾಗು. ನಾಳೆಯ ರಾತ್ರೆ ನಾಟಕವಿರುವುದರಿಂದ ನಿದ್ರೆ ಕೆಡಬೇಕಾಗುತ್ತದೆ ಎಂದು ಹೇಳಿ ಹೊರಟುಹೋದನು.

ಇತ್ತ ಸನ್ಸ್ಥಾಪಕನು ಆತುರದಿಂದ ನಿರೀಕ್ಷಿಸುತ್ತಿದ್ದ ನಾಟಕದ ರಾತ್ರೆಯು ಬಂದಿತು. ಅರಮನೆಯೆಲ್ಲಾ ದೀಪಗಳಿಂದ ಝಗ ಝಗಿಸುತ್ತಿದ್ದಿತು. ನಾಟಕಶಾಲೆಯ ಸೊಬಗನ್ನು ಹೇಳುವುದೆಂತು? ಅದರಲ್ಲಿಯೂ ರಂಗಸ್ಥಳದಲ್ಲಿ ಕಟ್ಟಿದ್ದ ತೆರೆಗಳು ನಿಜವಾದ ಅರಮನೆ, ವನ, ಉದ್ಯಾನವನ, ಪರ್ವತ, ತಟಾಕ, ನದಿ, ಸಮುದ್ರಗಳನ್ನು ಮೀರಿಸುವುದಾಗಿದ್ದವು. ಪಟ್ಟಣದ ಪ್ರಮುಖ ವರ್ತಕರೂ, ದೊಡ್ಡ ಮನುಷ್ಯರೂ, ಅಧಿಕಾರಿಗಳೂ ತಂಡೋಪತಂಡವಾಗಿ ಬರಲು ಪ್ರಾರಂಭವಾಯಿತು. ನಾಟಕಶಾಲೆಯು ಜನಗಳಿಂದ ತುಂಬಿ ತುಳುಕುತ್ತಿದ್ದಿತು. ಸನ್ಸ್ಥಾಪಕನೂ ಸೌಮಿತ್ರಕನೂ ಮೊದಲೇ ಬಂದು ಅನುಕೂಲವಾದ ಸ್ಥಳದಲ್ಲಿ ಕುಳಿತಿದ್ದರು. ಕಡೆಯಲ್ಲಿ ರಾಜವಂಶೀಯರಿಂದಲೂ, ಮಹಾರಾಣಿಯಿಂದಲೂ, ಮೈಗಾವಲಿನವ ರಿಂದಲೂ ಪರಿವೃತನಾಗಿ ಅರಸನಾದ ಭುಜಂಗಮನು ಕುಣಿ ಕುಣಿ ಯುತ್ತಾ ಮಹಾಸಂತೋಷದಿಂದ ಉಚಿತಾಸನದಲ್ಲಿ ಆಸೀನನಾದನು.

ಕತ್ತನ್ನು ತಿರುಗಿಸಿ ಹಿಂದುಗಡೆ ನೋಡಿದರೆ ದೊಡ್ಡ ಮನುಷ್ಯರ, ವರ್ತಕಮಹಾಶಯರ ಗುಂಪು; ಎಡಬಲಗಳಲ್ಲಿ ನೋಡಿದರೆ ಮಂತ್ರಿಮಂಡಲಿಯು, ರಾಜವಂಶೀಯರ ಗುಂಪು; ಮುಂದೆ ನೋಡಿದರೆ, ರಂಗಸ್ಥಳದ ತೆರೆಗಳು ಕಂಗೊಳಿಸುತ್ತಿದ್ದವು. ಇವನ ಸಂತೋಷಕ್ಕೆ ಮೇರೆಯೇ ಇಲ್ಲ. ಮಹಾರಾಣಿಯು ಪಕ್ಕದಲ್ಲಿಯೇ ಇದ್ದಾಳೆ. ಸನ್ತಾಪಕನು ಒಡ್ಡಿದ್ದ ಬಲೆಯು ಈ ಮದಾಂಧನ, ಕೊಲೆಪಾತಕನ, ಭ್ರಾತೃದ್ರೋಹಿಯ ಕಣ್ಣುಗಳೆರಡಕ್ಕೂ ಅದೃಶ್ಯವಾಗಿದ್ದಿತು. ನಾಟಕವು ಕೆಲವು ನಿಮಿಷಗಳೊಳಗಾಗಿ ಅರಸನ ಮತ್ತು ಮಹಾರಾಣಿಯ ಸಂಭಾಷಣೆಯಿಂದ ಪ್ರಾರಂಭಿಸಿತು. ಸನ್ತಾಪಕನೂ ಸೌಮಿತ್ರಕನೂ, ಭುಜಂಗಮನನ್ನೂ ಮಹಾರಾಣಿಯನ್ನೂ ಲಕ್ಷ್ಯವಿಟ್ಟು ದೃಷ್ಟಿಸುತ್ತಲೇ ಕುಳಿತಿದ್ದರು.

ಕಥಾನಾಯಕನು—ಪ್ರಿಯೇ, ತತ್ಕಾಲದಲ್ಲಿ ನಾವೀರ್ವರೂ ಇಷ್ಟು ಅನ್ಯೋನ್ಯಾನುರಾಗದಿಂದ ವರ್ತಿಸುತ್ತಿದ್ದೇವೆ. ಒಂದು ಘಳಿಗೆಯಾದರೂ ಒಬ್ಬರನ್ನೊಬ್ಬರು ಅಗಲಿರುವುದು ಬಹು ಕಷ್ಟ. ಇಂತಹದರಲ್ಲಿ ದೈವವಶಾತ್ ನಾನು ಮರಣಾಧೀನನಾದರೆ ನೀನು ಏನು ಮಾಡುವಿ? ಹೇಗಿರುವಿ?

ಕಥಾನಾಯಕಿ—ಪ್ರಿಯಾ, ನಾವಿಬ್ಬರೂ ಇಂತಹ ಸಂತೋಷದಲ್ಲಿರುವ ಸಮಯದಲ್ಲಿ ನೀವು ಈ ವಿಷವಾಕ್ಯನ್ನುಸಿರಬಹುದೇ? ಇದು ಕರ್ಣಕಠೋರವಾದ ವಾಕ್ಯ. ದಯಮಾಡಿ ಆ ಪ್ರಸ್ತಾಪವನ್ನೇ ಎತ್ತಬೇಡಿ. ಭಗವಂತನು ನನ್ನ ಪ್ರಿಯರಾದ ನಿಮಗೆ ದೀರ್ಘಾಯಸ್ಸನ್ನು ಅನುಗ್ರಹಿಸಲಿ.

ಕಥಾನಾಯಕ—ಪ್ರಿಯೆ, ಎಷ್ಟು ದೀರ್ಘಾಯಸ್ಸು ಇದ್ದಾಗ್ಯೂ ಒಂದಾನೊಂದು ದಿವಸ ಸಾಯಲೇಬೇಕಲ್ಲವೇ? ಹಾಗೇನಾದರೂ ನಾನು ಮೃತನಾದಪಕ್ಷದಲ್ಲಿ ನೀನು ಪುನಹ ವಿವಾಹವಾಗುವುದಿಲ್ಲವೇ?

ಕಥಾನಾಯಕಿ—ಆಹಾ! ಪ್ರಿಯಾ, ಎಂತಹ ಮಾತು ನುಡಿದಿರಿ! ಆ ಶಬ್ದವನ್ನು ಕೇಳಲಾರೆನು. ಜೀವರತ್ನಕ್ಕೆ ಸಮಾನರಾದ ನಿಮ್ಮನ್ನು ಕಳೆದುಕೊಂಡ ತರುವಾಯ ಲೋಕದಲ್ಲಿ ಜೀವಿಸಿ ಮತ್ತೊಬ್ಬ ಗಂಡನೊಂದಿಗೆ ಸಂಸಾರ ಮಾಡೇನೇ? ಇಂತಹ ಮಾತಾಡಬೇಡಿ. ನೀವು ಮೃತಿಹೊಂದಿದ ಘಳಿಗೆಯಲ್ಲಿಯೇ ನಾನು ಸಹ ಮೃತಿಹೊಂದುವುದು ಸತ್ಯವಾದ ಮಾತು. ಅರಘಳಿಗೆಯಾದರೂ ಜೀವಿಸುವೆನೆಂದು ತಿಳಿಯಬೇಡಿ. ಪತಿದ್ರೋಹಿಗಳಾದವರು ಮಾತ್ರವೇ ತಮ್ಮ ಪತಿಗಳನ್ನು ಕೊಂದು ಅಥವ ಇತರರಿಂದ ಕೊಲ್ಲಿಸಿ ಎರಡನೆಯ ವಿವಾಹಮಾಡಿಕೊಳ್ಳುತ್ತಾರೆಯೇ ಹೊರ್ತು ಎಲ್ಲಾ ಸ್ತ್ರೀಯರೂ ಹಾಗೆ ಮಾಡ್ತ್ಯಾರೇ? ಇಂತಹ ಸತಿಯರಿಗೆ ಭಗವಂತನು ಎಂತಹ ರೌರವನರಕವನ್ನು ಕೊಡುತ್ತಾನೋ ಹೇಳಬಲ್ಲವರ್ಯ್ಯಾರು? ನನ್ನ ಪ್ರಾಣಕಾಂತಾ, ಈ ಪ್ರಸ್ತಾಪವನ್ನು ನಿಲ್ಲಿಸಿರಿ. ಈ ವಾಕ್ಯ ನನ್ನ ಹೃದಯವನ್ನು ಘಾಯಪಡಿಸಿ ಕಣ್ಣುಗಳಲ್ಲಿ ನೀರು ಬರಿಸುತ್ತದೆ ಎಂದು ಹೇಳಿ ಪತಿಯನ್ನು ಆಲಂಗಿಸಿಕೊಂಡಳು.

"ಮಾಡಿದ ಪಾಪಕ್ಕೆ ಮನವೇ ಸಾಕ್ಷಿ, ತೋಡಿದ ಭಾವಿಗೆ ಜಲವೇ ಸಾಕ್ಷಿ" ಎಂಬ ಗಾದೆಯು ಭುಜಂಗನು ಮತ್ತು ಕಪಟಾವತಿಯರ ಸಂಬಂಧದಲ್ಲಿ ನಿಜವೇ ಆಯಿತು. ಹೇಗೆಂದರೆ— ರಂಗಸ್ಥಳಕ್ಕೆ ಕೇವಲ ಸಮೀಪದಲ್ಲಿ ಗಂಡನಾದ ಭುಜಂಗನೊಂದಿಗೆ ಕುಳಿತಿದ್ದ ಸನ್ತಾಪಕನ ತಾಯಿಗೆ ಧನಂಜಯ ಮಹಾರಾಜನ ಪತ್ನಿಯ ಪಾತ್ರವಹಿಸಿದವನ ಮಾತುಗಳನ್ನು ಕೇಳಿ ತಕ್ಷಣವೇ ಮುಖವೆಲ್ಲಾ ಬೆವತು, ಬಿಳುಪೇರಿ, ತುಟಿಗಳು ಒಣಗಿ ಕರಟಾಗಿಹೋದವು. ಪ್ರತಿಯೊಂದು ಮಾತೂ ಈಕೆಯ ಕಿವಿಗೆ ಬೀಳಲು ಸಾವಿರಾರು ಸರಳುಗಳು ಹೃದಯವನ್ನು ಚುಚ್ಚುತ್ತಿವೆಯೋ ಎಂಬಂತಿದ್ದಿತು. ಮರೆಯಲ್ಲಿ ಕುಳಿತು ಹೊಂಚು ಹಾಕಿಕೊಂಡು

ನೋಡುತ್ತಿದ್ದ ಸನ್ತಾಪಕನೂ ಸೌಮಿತ್ರಕನೂ ಈಕೆಯ ಮುಖ ದಲ್ಲುಂಟಾದ ಬದಲಾವಣೆಯನ್ನು ನೋಡಿ ವಿಸ್ಮಯಗೊಂಡರು. ನಿರಾಧಾರಿಯಾಗಿ ಕೂತುಕೊಳ್ಳಲು ಶಕ್ತಿಯಡಗಿ ಪಕ್ಕದಲ್ಲಿದ್ದ ಭುಜಂಗಮನ ಎಡಭುಜದ ಮೇಲೆ ಒರಗಿಕೊಂಡಳು. ಭುಜಂಗ ಮನು ಈಕೆಯ ಸ್ಥಿತಿಯನ್ನು ನೋಡಿ ಘಾಬರಿಯಾದನು. ಎಷ್ಟು ಮಾತನಾಡಿಸಿದಾಗ್ಯೂ ಮಾತೇ ಇಲ್ಲ. ಅರಿವು ಇದ್ದಾಗ್ಯೂ ಮನೋಪೀಡನೆಯಿಂದ ತುಟಿಗಳೆರಡೂ ಒಂದಕ್ಕೊಂದು ಅಂಟಿ ಹೋಗಿದ್ದುವು. ತಕ್ಷಣವೇ ತನ್ನ ಕರವಸ್ತ್ರವನ್ನು ತೆಗೆದು ಮುಖದ ಬೆವರನ್ನೆಲ್ಲಾ ಒರಸಿ ಗಾಳಿ ಬೀಸುತ್ತಿದ್ದನು. ಅಷ್ಟರಲ್ಲಿ ಮತ್ತೊಂದು ದೃಶ್ಯವು ಪ್ರದರ್ಶನವಾಯಿತು. ಅದು ಉದ್ಯಾನವನದ ದೃಶ್ಯ— ಉದ್ಯಾನವನದ ಒಂದು ವೃಕ್ಷದಡಿಯಲ್ಲಿ ಒಂದುದಿನ ಮಧ್ಯಾಹ್ನ ಕಥಾನಾಯಕನಾದ ಧನಂಜಯಮಹಾರಾಜನು ಮಲಗಿ ನಿದ್ರಿಸು ತ್ತಿರುತ್ತಾನೆ. ಮಹಾರಾಜನ ರಕ್ತಸಂಬಂಧಿಗಳಲ್ಲಿ ಒಬ್ಬನು ಯಾರೂ ಅರಿಯದಂತೆ ಆ ಸ್ಥಳಕ್ಕೆ ಬಂದು ನಿಶ್ಚಿಂತೆಯಿಂದ ಆಯಾಸಪರಿಹಾರಾರ್ಥವಾಗಿ ಮಲಗಿ ನಿದ್ರಿಸುತ್ತಿದ್ದ ಧನಂಜಯ ಮಹಾರಾಜನ ಕಿವಿಯಲ್ಲಿ ಯಾವುದೋ ಒಂದು ವಿಷಮೂಲಿಕೆಯ ರಸವನ್ನು ಹಿಂಡಿದನು. ಕೂಡಲೇ ಮಹಾರಾಜನು ಒದ್ದಾಡಿ ಒದ್ದಾಡಿ ಮೃತಿಹೊಂದಿದನು. ಈ ದೃಶ್ಯವು ಭುಜಂಗಮನ ಶರೀರಾದ್ಯಂತವನ್ನೂ ಕಂಪಿಸತೊಡಗಿತು. ಕಪಟಾವತಿಯ ಮುಖದ ಬೆವರನ್ನು ಒರೆಸುತ್ತಾ ಇದ್ದ ಕರವಸ್ತ್ರವು ತಾನಾಗಿ ಕೆಳಗೆ ಬಿದ್ದುಹೋಯಿತು. ಇಷ್ಟರಲ್ಲಿ ಕಪಟಾವತಿಯು ಸ್ವಲ್ಪ ಮಟ್ಟಿಗೆ ಚೇತರಿಸಿಕೊಂಡಿದ್ದಾಗ್ಯೂ ತಾನು ಮೊದಲು ಯಾವ ದೃಶ್ಯದ ಪ್ರದರ್ಶನಮಾತ್ರದಿಂದ ಇಂತಹ ಸ್ಥಿತಿಗೆ ಬಂದಿದ್ದಳೋ ಆ ದೃಶ್ಯವು ಈಗಲೂ ಕಣ್ಣೆದುರಿನಲ್ಲಿಯೇ ಇದ್ದಂತಿದ್ದಿತು.

ಆ ದೃಶ್ಯದ ಬಾಷಣವ್ರೋ ಕಿವಿಗಳಲ್ಲಿ ಝೇಂಕರಿಸುತ್ತಲೇ ಇದ್ದಿತು. ಉದ್ಯಾನವನದ ದೃಶ್ಯದಿಂದ ಪತಿಯಾದ ಭುಜಂಗಮನಿಗೂ ನಡುಕ ಪ್ರಾಪ್ತವಾಯಿತು. ತಾನು ಮೂರು ತಿಂಗಳಿನ ಹಿಂದೆ ಉದ್ಯಾನ ವನದಲ್ಲಿ ತನ್ನ ಅಣ್ಣನಿಗೆ ವಿಷಪ್ರಯೋಗಮಾಡಿ ಕೊಂದ ಸಂಗತಿಯು ನೆನಪಾಗಿ ತಲ್ಲಣಿಸಿ ಹೋದನು. ಇಷ್ಟರಲ್ಲಿ ಮತ್ತೊಂದು ದೃಶ್ಯವು ಪ್ರದರ್ಶನವಾಯಿತು. ಇದು ಅರಮನೆಯ ದೃಶ್ಯ. ಇದರಲ್ಲಿ ವಿಷ ಪ್ರಯೋಗದಿಂದ ಮೃತನಾದ ಧನಂಜಯ ಮಹಾರಾಜನ ಪತ್ನಿ ಯನ್ನು ಕೊಲೆಪಾತಕನು ತನ್ನ ಪ್ರೇಮಭಾಷಣಗಳಿಂದಲೂ ಆಲಿಂಗನಾದಿಗಳಿಂದಲೂ ವಶಪಡಿಸಿಕೊಳ್ಳಲು ಪ್ರಯತ್ನಿಸುವುದು. "ಪ್ರಿಯಾ, ಎಂತಹ ಮಾತು ನುಡಿದಿರಿ ! ಆ ಶಬ್ದವನ್ನು ಕೇಳ ಲಾರೆನು. ಜೀವರತ್ನಕ್ಕೆ ಸಮಾನರಾದ ನಿಮ್ಮನ್ನು ಕಳೆದುಕೊಂಡ ತರುವಾಯ ಲೋಕದಲ್ಲಿ ಜೀವಿಸಿ ಮತ್ತೊಬ್ಬ ಗಂಡನೊಂದಿಗೆ ಸಂಸಾರಮಾಡೇನೇ ? ಇಂತಹ ಮಾತಾಡಬೇಡಿ. ನೀವು ಮೃತಿ ಹೊಂದಿದ ಘಳಿಗೆಯಲ್ಲಿಯೇ ನಾನು ಸಹ ಮೃತಿಹೊಂದುವುದು ಸತ್ಯವಾದ ಮಾತು. ಅರಘಳಿಗೆಯಾದರೂ ಜೀವಿಸುವೆ ನೆಂದು ತಿಳಿಯಬೇಡಿ." ಎಂದು ಕಣ್ಣೀರಿನಿಂದ ಪತಿದೇವನ ಪಾದವನ್ನು ತೋಯಿಸಿ, ಆಲಂಗಿಸಿಕೊಂಡ ಧನಂಜಯನ ಪತ್ನಿಯು ಪತಿಗೆ ಮಾಡಿದ ವಾಗ್ದಾನವನ್ನು ಸಂಪೂರ್ಣವಾಗಿ ಮರೆತು ಕೊಲೆಪಾತಕನ ಪ್ರೇಮಪಾಶಕ್ಕೆ ಸಿಲುಕಿ ಅವನನ್ನು ವಿವಾಹವಾಗುವುದು.

ಈ ದೃಶ್ಯವನ್ನು ಸಹ ನೋಡಿದ ಭುಜಂಗಮನ ಸ್ಥಿತಿಯನ್ನು ಹೇಗೆ ವರ್ಣಿಸಬಹುದು ? ತಾನು ಮಾಡಿದ ದುಷ್ಕೃತ್ಯವು ಬಯ ಲಿಗೆ ಬಿದ್ದಿತಲ್ಲಾ ಎಂದು ಭಯಪೀಡಿತನಾದನು. ದೃಶ್ಯವನ್ನು ನೋಡಲಾಗದೆ ಕಣ್ಣುಗಳೆರಡೂ ಮೊಬ್ಬಾದವು. ಮೈಯೆಲ್ಲಾ

ಬೆವತು ಧರಿಸಿದ್ದ ಅಮೂಲ್ಯವಾದ ವಸ್ತ್ರಗಳೆಲ್ಲಾ ಒದ್ದೆಯಾದವು. ತಾನು ತನ್ನ ಅಣ್ಣನನ್ನು ವಿಷಪ್ರಯೋಗಮಾಡಿ ಕೊಲ್ಲುವುದಕ್ಕಾಗಿ ಉದ್ಯಾನವನದಲ್ಲಿ ಹೊಂಚುಕಾಯುತ್ತಿದ್ದುದೂ, ಅಣ್ಣನು ಗಾಢನಿದ್ರೆಯಲ್ಲಿದ್ದಾಗ ಕಿವಿಯಲ್ಲಿ ವಿಷಮೂಲಿಕೆಯನ್ನು ಹಿಂಡಿದುದೂ, ಅಣ್ಣನು ಪ್ರಾಣಬಿಡುವ ಮುಂಚೆ ಸಂಕಟಪಟ್ಟುದುದೂ, ಅಣ್ಣನ ಪತ್ನಿಯನ್ನು ತನ್ನ ವಶಪಡಿಸಿಕೊಂಡುದುದೂ, ಆಕೆಯನ್ನು ವಿವಾಹವಾದುದೂ ಎಲ್ಲವೂ ನೆನಪಾಗಿ ಅವನ ಹೃದಯವು ಡವಡವನೆ ಬಡಿದುಕೊಳ್ಳಲಾರಂಭಿಸಿತು. ನಾಟಕಶಾಲೆಯೆಲ್ಲಾ ಗರಗರನೆ ಸುತ್ತುವಂತಿದ್ದಿತು. ಕೂಡುವುದಕ್ಕಾಗಲೀ, ನಿಲ್ಲುವುದಕ್ಕಾಗಲೀ ಶಕ್ತಿಯೇ ಇಲ್ಲ. ಮೈಯಲ್ಲೆಲ್ಲಾ ನಡುಕ ಹುಟ್ಟಿತು. ನಾಟಕಶಾಲೆಯಲ್ಲಿ ಒಂದು ಘಳಿಗೆಯಾದರೂ ಕೂಡಲಾಗಲಿಲ್ಲ. ಕಡೆಗೆ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಸ್ಥಳದಿಂದೆದ್ದು ಬೆಬ್‌ಬ್‌ಳಕು.......ಬೆಬ್‌ಬೆಬ್‌ಬ್‌ಳಕು ತಸ್ನರಿ. ಬೇಬ್‌ಬ್‌ಗ ತತ್‌ತ್‌ನ್‌ರಿ ಎಂದು ತೊದಲುತ್ತಾ ಹುಚ್ಚು ಹಿಡಿದವನಂತೆ ಕೂಗಿಕೊಂಡನು. ತಕ್ಷಣವೇ ಸೇವಕರು ಬೆಳಕುಗಳನ್ನು ತಂದರು. ಭುಜಂಗಮನು ಕಪಟಾವತಿಯನ್ನು ಕರೆದುಕೊಂಡು ಅರಮನೆಗೆ ಹೊರಟುಹೋದನು. ಅರಸನು ಇದ್ದಕ್ಕಿದ್ದ ಹಾಗೆ ಹೀಗೆ ಮಾಡಿದುದನ್ನು ನೋಡಿ ನಾಟಕಶಾಲೆಯಲ್ಲಿದ್ದ ಪ್ರಧಾನರೇ ಮೊದಲಾದವರಿಗೆ ಬಹಳ ಆಶ್ಚರ್ಯವಾಗಿ ಒಬ್ಬರ ಮುಖವನ್ನೊಬ್ಬರು ನೋಡುವುದಕ್ಕಾರಂಭಿಸಿದರು. ಯಾರಿಗಾದರೂ ಸರಿಯೇ ತಮ್ಮ ಅರಸನು ಹೀಗೆ ಘಾಬರಿಯಾದುದಕ್ಕೂ, ಅರ್ಧ ಆಟದಲ್ಲಿ ಹೊರಟುಹೋದುದಕ್ಕೂ ಕಾರಣವನ್ನು ತಿಳಿಯಲು ಸಾಧ್ಯವಾಗಲಿಲ್ಲ. ಅರಸನು ಹೊರಟುಹೋದಕೂಡಲೇ ಆಟವನ್ನು ಪೂರ್ತಿಗೊಳಿಸದೆ ನಿಲ್ಲಿಸಿಯೇ ಬಿಟ್ಟರು. ಪ್ರೇಕ್ಷಕರೆಲ್ಲರೂ ಭ್ರಾಂತರಾಗಿ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಸನ್ತಾಪಕನೂ

ಸೌಮಿತ್ರಕನೂ ಮಾತ್ರ ನಾಟಕಶಾಲೆಯಲ್ಲಿ ಸ್ವಲ್ಪಹೊತ್ತಿದ್ದು ನಾಟಕದವರಿಗೆ ಅಪ್ಪಣೆಯನ್ನು ಕೊಟ್ಟು ಕಳುಹಿಸಿಬಿಟ್ಟರು. ಆ ದಿನ ಕಾಣಿಸಿಕೊಂಡದ್ದು ತನ್ನ ಪಿತೃಭೂತವೇ ಎಂತಲೂ, ಪಿತೃಭೂತವು ಹೇಳಿದುದು ಅಕ್ಷರಶಹ ನಿಜವೆಂತಲೂ, ಸಂಶಯದಿಂದ ಕಾರ್ಯ ಸಾಧನೆಗಾಗಿ ಸಂಕೋಚಪಡುತ್ತಿದ್ದ ಸಸ್ತಾಪಕನಿಗೆ ಪರಿಷ್ಕಾರವಾಗಿ ತಿಳಿಯಬಂದಿತು. ಭುಜಂಗಮನ ಮತ್ತು ತನ್ನ ತಾಯಿಯಾದ ಕಪಟಾವತಿಯ ವರ್ತನೆಯಿಂದ ಅವನಲ್ಲಿದ್ದ ಸಂಶಯ ವೆಲ್ಲಾ ನಿವಾರಣೆಯಾಯಿತು. ತನ್ನ ಪ್ರಿಯಜನಕನನ್ನು ಪಾಪಿಯಾದ ಭುಜಂಗಮನೇ ಕೊಂದಿದ್ದಾನೆಂದು ಮನಸ್ಸಿಗೆ ಖಚಿತವಾಯಿತು.

---

# ಅಧ್ಯಾಯ 6

## ಮಾತೃಗುಣ ಖಂಡನೆ ಮತ್ತು ಮಂತ್ರಿಯಾದ ಕುತಂತ್ರಿಕನ ಮರಣ.

ರಾಜ್ಯಾಪಹಾರಕ್ಕಾಗಿಯೂ ತನ್ನ ತಾಯಿಯ ಪಾತಿವ್ರತ್ಯ ವನ್ನು ಭಂಗಪಡಿಸುವುದಕ್ಕಾಗಿಯೂ ತನ್ನ ಚಿಕ್ಕಪ್ಪನಾದ ಭುಜಂಗ ಮನೇ ತನ್ನ ತಂದೆಯನ್ನು ಅಕಾಲಮರಣಕ್ಕೆ ಗುರಿಪಡಿಸಿರುವ ನೆಂದು ಆ ರಾತ್ರಿಯ ನಾಟಕಪ್ರದರ್ಶನದಲ್ಲಿ ಇವರೀರ್ವರ ಚರ್ಯೆ ಗಳಿಂದ ಸ್ಪಷ್ಟವಾಯಿತು. ಸನ್ತಾಪಕನು ತನ್ನ ಪಿತೃಭೂತಕ್ಕೆ ಮಾಡಿದ್ದ ಪ್ರತಿಜ್ಞೆಯನ್ನು ಕ್ಷಿಪ್ರದಲ್ಲಿಯೇ ನೆರವೇರಿಸಲು ದೃಢ ಚಿತ್ತನಾದನು. ಆದರೆ ಇದನ್ನು ಹೇಗೆ ನೆರವೇರಿಸಬೇಕೆಂದು ಸೌಮಿ ತ್ರಕನೊಂದಿಗೆ ನಾಟಕಶಾಲೆಯಲ್ಲಿ ಆಲೋಚಿಸುತ್ತಿರುವಲ್ಲಿ ಅರಮನೆ ಯಿಂದ ಸೇವಕನೊಬ್ಬನು ಬಂದು— ಸ್ವಾಮಿಾ, ಮಹಾರಾಣಿ ಯವರು ತಮ್ಮನ್ನು ತಕ್ಷಣವೇ ಕರೆದುಕೊಂಡು ಬರಹೇಳಿದರು; ದಯಮಾಡಿಸಿರಿ ಎಂದನು.

ಸನ್ತಾಪಕ—ನೀನು ಹೋಗಿ ಈಗಲೇ ಬರುತ್ತೇನೆಂದು ಹೇಳು.

ಸೌಮಿತ್ರಕ—ಯುವರಾಜಾ ! ಇಂತಹ ಅವೇಳೆಯಲ್ಲಿ ಮಹಾರಾಣಿಯವರು ನಿನ್ನನ್ನು ಬರಹೇಳಲು ಕಾರಣವೇನಿರಬಹುದು?

ಸನ್ತಾಪಕ—ನನಗೊಂದೂ ತಿಳಿಯದು. ನಾನು ಹೋಗಿ ಬರುತ್ತೇನೆ. ಮಿತ್ರಾ, ನೀನೂ ಸಹ ಹೋಗಿ ವಿಶ್ರಾಂತಿಹೊಂದಿ ನಾಳೆ ಪ್ರಾತಃಕಾಲ ಸ್ವಲ್ಪ ಜಾಗ್ರತೆಯಾಗಿ ಬಾ.

ಸೌಮಿತ್ರಕ—ಹಾಗೆಯೇ ಆಗಲಿ ; ಹೋಗಿಬರುತ್ತೇನೆ ಎಂದು ಹೇಳಿ ಹೊರಟುಹೋದನು.

ಇತ್ತ ನಾಟಕವು ಪೂರ್ತಿಯಾಗುವುದಕ್ಕೆ ಮುಂಚೆಯೇ ಮನಸ್ತಾಪಪೀಡಿತರಾಗಿ ಹೊರಟುಹೋದ ಭುಜಂಗಮನೂ ಕಪಟಾವತಿಯೂ ಬಂದು, ಕೊಠಡಿಯಲ್ಲಿ ಒಬ್ಬರನ್ನೊಬ್ಬರು ದೃಷ್ಟಿಸುತ್ತಾ ಚಿತ್ರದಲ್ಲಿನ ಗೊಂಬೆಗಳಂತೆ ಕುಳಿತಿದ್ದರು. ಇನ್ನೂ ಕೈಕಾಲುಗಳು ನಡುಗುತ್ತಲೇ ಇದ್ದವು. ಮಾತನಾಡಬೇಕೆಂದರೆ ತುಟಿಗಳೆರಡೂ ಅಂಟಿಹೋಗಿದ್ದವು. ಇಬ್ಬರಿಗೂ ಎದೆಯು ಡವಡವನೆ ಬಡಿದು ಕೊಳ್ಳುತ್ತಲೇ ಇದ್ದಿತು. ಸ್ವಲ್ಪಹೊತ್ತಿನ ತರುವಾಯ ಕಪಟಾವತಿಯು ಪ್ರಿಯಾ, ಅಕಸ್ಮಾತ್ತಾಗಿ ನಿನ್ನಲ್ಲಿ ಉಂಟಾಗಿರುವ ಬದಲಾವಣೆಗೆ ಕಾರಣವೇನು? ಶರೀರಾದ್ಯಂತವೂ ಬೆವತು ನಡುಗುತ್ತಿದೆಯಲ್ಲಾ! ನಿನ್ನ ಸ್ಥಿತಿಯನ್ನು ನೋಡಿದರೆ ನನಗೆ ಭಯವಾಗುತ್ತದೆ. ನನ್ನ ಕಾಂತಾ, ಯಥಾರ್ಥವನ್ನು ಹೇಳು. ಯಾವುದನ್ನೂ ಮರೆಮಾಚಬೇಡ ಎಂದು ಕೇಳಿಕೊಂಡಳು. ಇದಕ್ಕೆ ಭುಜಂಗಮನು—ಪ್ರಿಯೇ, ನಾನು ಏನು ಹೇಳಲಿ? ಈ ರಾತ್ರೆ ನಾನು ನಾಟಕದಲ್ಲಿ ನೋಡಿದ ದೃಶ್ಯಗಳೇ ನನ್ನ ಈ ಬದಲಾವಣೆಗೆ ಕಾರಣವು. ನನ್ನ ಅಣ್ಣನ ರಾಜ್ಯಾಪಹಾರಕ್ಕಾಗಿ ನಾನು ಮಾಡಿದ ಮಹಾಪಾತಕವು ನನ್ನನ್ನು ಬಹಳವಾಗಿ ಬಾಧಿಸುತ್ತಿದೆ. ನೀನು ಈ ಕ್ಷಣವೇ ನಿನ್ನ ಮಗನಾದ ಸನ್ತಾಪಕನನ್ನು ಕರೆಯಿಸಿ ನಾವು ಮಾಡಿರುವ ದುಷ್ಕೃತ್ಯಗಳು ಅವನಿಗೆ ತಿಳಿದಿವೆಯೇ ಎಂಬುದನ್ನು ಬಹು ಉಪಾಯದಿಂದ ವಿಚಾರಿಸಿ ತಿಳಿದುಕೋ. ನನಗಾದರೋ ಈ ವಿಷಯದಲ್ಲಿ ಬಹಳ ಸಂಶಯವಿದೆ. ನಾನು ಕುಳಿತುಕೊಳ್ಳಲಾರೆನು; ಬಹಳ ನಿತ್ರಾಣವಾಗಿದೆ. ಸನ್ತಾಪಕನನ್ನು ಬೇಗ ಕರೆಯಿಸು. ನಾನು ಹೋಗಿ ಸ್ವಲ್ಪ ವಿಶ್ರಾಂತಿ ಪಡೆಯುತ್ತೇನೆಂದು

ಹೇಳಿ ಆ ಕೊಠಡಿಯನ್ನು ಬಿಟ್ಟು ಹೊರಗೆ ಬಂದು ಆಪ್ತಮಂತ್ರಿಯಾದ ಕುತಂತ್ರಿಕನನ್ನು ಕರೆದು—ಮಂತ್ರೀ, ನೀನು ಮಹಾರಾಣಿಯು ಕುಳಿತಿರುವ ಕೊಠಡಿಗೆ ಹೋಗಿ ಆಕೆಗೆ ತಿಳಿಯದಂತೆ ಎಲ್ಲಾದರೂ ಅವಿತುಕೊಂಡಿದ್ದು ಸನ್ತಾಪಕನಿಗೂ ಆಕೆಗೂ ಏನು ಪ್ರಸ್ತಾಪವಾಗುತ್ತದೆಯೋ ಅದನ್ನು ಚೆನ್ನಾಗಿ ಕೇಳಿಸಿಕೊಂಡು ನನಗೆ ತಿಳಿಸು ಎಂದನು. ಆಕೆಯು ಹ್ಯಾಗೂ ಅವನ ತಾಯಿ. ಅವನು ನನ್ನ ವಿಷಯದಲ್ಲಿ ಕೆಟ್ಟದ್ದೇನಾದರೂ ಹೇಳಿದರೆ ಮಗನಮೇಲಣ ಪ್ರೀತಿಯಿಂದ ನನಗೆ ತಿಳಿಸದೆ ಮುಚ್ಚಿಡಬಹುದು. ಎಚ್ಚರಿಕೆ, ಯಾರ ಕಣ್ಣಿಗೂ ಬೀಳಬೇಡ. ಸನ್ತಾಪಕನನ್ನು ಕರೆಯಲು ಸೇವಕನು ಹೋಗಿದ್ದಾನೆ. ಅವನು ಇಷ್ಟರಲ್ಲೇ ಬಂದಿರಬಹುದೇನೋ. ಬೇಗ ಹೋಗು, ನಾನು ನನ್ನ ಕೊಠಡಿಯಲ್ಲಿ ನಿನಗಾಗಿ ಕಾದಿರುತ್ತೇನೆ ಎಂದು ಹೊರಟು ಹೋದನು. ಕುತಂತ್ರಿಕನು ಅರಸನ ಆಜ್ಞಾನುಸಾರವಾಗಿ ಮಹಾರಾಣಿಯ ಕೊಠಡಿಯಲ್ಲಿ ಒಂದು ತೆರೆಯ ಹಿಂದೆ ಅಡಗಿಕೊಂಡನು. ಇಷ್ಟರಲ್ಲಿ ಸನ್ತಾಪಕನು ತಾಯಿಯಲ್ಲಿಗೆ ಬಂದು —ತಾಯಿಯೇ, ನೀನು ಇಂತಹ ಅವೇಳೆಯಲ್ಲಿ ನನ್ನನ್ನು ಕರೆಯಿಸಲು ಕಾರಣವೇನು ? ಅಂತಹ ಅವಸರವಾದ ಕೆಲಸವೇನಿದೆ ?

ರಾಣಿ—ಮಗನೇ, ಈಚೆಗೆ ನಿನ್ನ ನಡತೆಯು ತೃಪ್ತಿಕರವಾಗಿಲ್ಲ. ನಿನ್ನ ತಂದೆಯ ಮನಸ್ಸನ್ನು ಬಹಳವಾಗಿ ನೋಯಿಸುತ್ತಿದ್ದೀ.

ಸನ್ತಾಪಕ—ನನ್ನ ನಡತೆಯು ತೃಪ್ತಿಕರವಾಗಿಲ್ಲವೇ? ಯಾರು ನನ್ನ ತಂದೆ ?

ರಾಣಿ—ನಿನ್ನ ತಂದೆಯು ಯಾರು ನಿನಗೆ ತಿಳಿಯದೇ ? ಆಶ್ಚರ್ಯ !

ಸನ್ಯಾಪಕ—ಆಶ್ಚರ್ಯವೇನು? ನನ್ನ ತಂದೆಯು ಮೃತನಾಗಿ ಅನೇಕ ತಿಂಗಳಾದವು.

ರಾಣಿ—ಏನು? ಆತನು ಮೃತನಾದರೂ ಈಗಿರುವಾತನು ನಿನಗೆ ತಂದೆಯಾಗಲಿಲ್ಲವೇ?

ಇದನ್ನು ಕೇಳಿದಾಕ್ಷಣ ಸನ್ಯಾಪಕನಿಗೆ ಬಹಳವಾಗಿ ಕೋಪ ಬಂದು ನನ್ನ ಪ್ರಿಯ ತಂದೆಯನ್ನು ಕೊಂದ ಕೊಲೆಪಾತಕನನ್ನು ನನ್ನ ತಂದೆ ಎಂದು ಹೇಳುತ್ತಾಳಲ್ಲಾ! ಶ್ರೇಷ್ಠವೂ ಘನವೂ ಆದ ಆ ಅಂಕಿತಕ್ಕೆ ಈ ದುಷ್ಟ ಕೊಲೆಪಾತಕನು ಯೋಗ್ಯನಾದಾನೇ? ಎಂದು ಮನದಲ್ಲಿ ಅಂದುಕೊಂಡು ಬಹು ತೀಕ್ಷ್ಣತೆಯಿಂದ ಅಮ್ಮಾ, ನನ್ನ ತಂದೆಯ ಮನಸ್ಸನ್ನು ನೋಯಿಸಿದವಳು ಮತ್ತು ನೋಯಿಸುತ್ತಿರುವವಳು ನೀನು, ನಾನಲ್ಲ.

ರಾಣಿ—ನನ್ನ ಪ್ರಶ್ನೆಗೆ ತಕ್ಕ ಉತ್ತರವಲ್ಲಾ.

ಸನ್ಯಾಪಕ—ನಿನ್ನ ಪ್ರಶ್ನೆಗೆ ಇದು ಸರಿಯಾದ ಉತ್ತರವೆಂದು ತಿಳಿದುಕೋ.

ರಾಣಿ—ನೀನು ಯಾರ ಮುಂದೆ ನಿಂತಿರುತ್ತೀ? ಯಾರ ಬಳಿ ಮಾತಾಡುತ್ತಿದ್ದೀ? ಮರೆತಿರುವಿಯೋ?

ಸನ್ಯಾಪಕ—ಅಕಟಾ! ನಾನು ಮರೆತುಹೋಗಿದ್ದರೆ ಬಹಳ ಚೆನ್ನಾಗಿರುತ್ತಿದ್ದಿತು. ನೀನೋ ಮಹಾರಾಣಿ, ನಿನ್ನ ಪತಿಯ ತಮ್ಮನ ಹೆಂಡತಿಯು ಮತ್ತು ನನ್ನ ತಾಯಿಯು. ಇದನ್ನು ನಾನು ಹೇಗೆ ಮರತೇನು? ನೀನು ನನ್ನ ತಾಯಿ ಎಂದು ಹೇಳಲು ನಾಚುತ್ತೇನೆ.

ರಾಣಿ—ನಿನಗೆ ಸ್ವಲ್ಪವಾದರೂ ಮರ್ಯಾದೆಯಿಲ್ಲವೇ? ಇಷ್ಟು ಅಪಮಾನಕರವಾಗಿ ಮಾತನಾಡಿದ್ದೀ ಆದರೆ ನಾನು ನಿನ್ನೊಂದಿಗೆ ಮಾತಾಡುವುದು ಪ್ರಯೋಜನವಿಲ್ಲ. ನಾನು ಈಗಲೇ ಹೋಗಿ

ಅರಸನನ್ನೂ ಮಂತ್ರಿಯಾದ ಕುತಂತ್ರಿಕರಾಯನನ್ನೂ ಕರತರು ತ್ತೇನೆಂದು ಎದ್ದಳು. ಸನ್ತಾಪಕನು ಈಕೆಯನ್ನು ಹೋಗಗೊಡಿಸ ಲಿಲ್ಲ. ಹೇಗಾದರೂ ಆಕೆಯು ಮಾಡಿರುವ ದುಷ್ಕೃತ್ಯವನ್ನು ಆಕೆಗೆ ತೋರಿಸಿ ಆಕೆಯಲ್ಲಿ ಪಶ್ಚಾತ್ತಾಪ ಹುಟ್ಟಿಸಿ ಆ ದುಷ್ಕೃತ್ಯದಿಂದ ಆಕೆಗೆ ಬಂದಿರುವ ಅಪಮಾನವನ್ನು ಹೋಗಲಾಡಿಸಿ ಪುನಃ ಪ್ರಜಾ ಪ್ರೀತಿಗೆ ಪಾತ್ರಳನ್ನಾಗಿ ಮಾಡಬೇಕೆಂದು ತನ್ನ ತಾಯಿಯ ಮುಂಗೈ ಯನ್ನು ಬಲವಾಗಿ ಹಿಡಿದು ಆಸನದ ಮೇಲೆ ಕೂಡ್ರಿಸಿದನು.

ರಾಣಿಯು ಸನ್ತಾಪಕನ ಮಾತುಗಳಿಗೆ ಭಯಪಟ್ಟು ಹುಚ್ಚು ಅಧಿಕವಾಗಿ ತನಗೆ ಪ್ರಾಣಾಪಾಯವೇನಾದರೂ ಆದೀತೆಂದು ಘಟ್ಟಿ ಯಾಗಿ ಅರಚಿಕೊಂಡಳು. ತಕ್ಷಣವೇ ಒಂದು ಮೂಲೆಯ ಕಡೆ ಯಿಂದ ರಾಣಿಯು ಪ್ರಾಣಾಪಾಯದಲ್ಲಿದ್ದಾಳೆ ಸಹಾಯಮಾಡಿರಿ, ಸಹಾಯಮಾಡಿರಿ, ಸಹಾಯಮಾಡಿರಿ ಎಂಬ ಶಬ್ದವು ಕೇಳಿಸಿತು. ಕೂಡಲೇ ಸನ್ತಾಪಕನು ಅರಸನು ತಾನೇ ಅಲ್ಲಿ ಅಡಗಿಕೊಂಡಿದ್ದಾ ನೆಂದು ಗ್ರಹಿಸಿ ಸಿಟ್ಟಿನಿಂದ ಖಡ್ಗವನ್ನು ಸೆಳೆದು, ಆ ಶಬ್ದವು ನಿಲ್ಲುವ ವರೆಗೂ ತಿವಿಯುತ್ತಲೇ ಇದ್ದನು. ಶಬ್ದವು ನಿಂತ ತರುವಾಯ ಅರಸನು ಸತ್ತನೆಂದು ಆ ಸ್ಥಳಕ್ಕೆ ಹೋಗಿ ಹೆಣವನ್ನು ನೋಡುವಾಗ ತನ್ನಿಂದ ಮೃತಿಹೊಂದಿದವನು ಮರೆಯಲ್ಲಿ ಅಡಗಿಕೊಂಡಿದ್ದ ಮಂತ್ರಿಯಾದ ಕುತಂತ್ರಿಕನೇ ಹೊರತು ಅರಸನಾದ ಭುಜಂಗನು ನಲ್ಲವೆಂದು ತಿಳಿದುಬಂದಿತು. ಆದರೂ ತಾನು ಮಾಡಿದ ಕ್ರೂರ ಕೃತ್ಯದ ವಿಷಯದಲ್ಲಿ ಸನ್ತಾಪಕನಿಗೆ ಭಯವಾಗಲಿ, ವ್ಯಸನವಾಗಲಿ ಸ್ವಲ್ಪವೂ ಇರಲಿಲ್ಲ. ಮಹಾರಾಣಿಯಾದ ಕಪಟಾವತಿಯು ಮಾತ್ರ —ಎಲೋ ಸನ್ತಾಪಕಾ, ಎಂತಹ ಭಯಂಕರವಾದ ಕೃತ್ಯವನ್ನು ಮಾಡಿದಿ ? ಎಂತಹ ಕ್ರೂರಕೃತ್ಯ ! ಎಂತಹ ಕ್ರೂರಕೃತ್ಯ ! ಎಂದು ಕೂಗಿಕೊಂಡಳು.

ಸನ್ತಾಪಕ—ಅಮ್ಮಾ, ಭಯಂಕರವಾದ ಕೃತ್ಯವೇ ?........ ಆದರೆ........ಆದರೆ ನನ್ನ ಪ್ರಿಯ ತಂದೆಯಾದ ಅರಸನನ್ನು ಕೊಂದು ಆತನ ತಮ್ಮನನ್ನು ವಿವಾಹವಾದ ನಿನ್ನ ಕೃತ್ಯಕ್ಕಿಂತಲೂ ನಾನು ಮಾಡಿರುವುದು ಭಯಂಕರವಾದುದೇ ? ಕ್ರೂರವಾದುದೇ ? ಹೇಯವಾದುದೇ ? ಪ್ರಿಯ ತಾಯಿಯೇ ! ಮಗನಾದ ನಾನು ನಿನ್ನೊಡನೆ ಇಷ್ಟು ಕಠಿಣವಾಗಿಯೂ, ಅವಮರ್ಯಾದೆಯಾಗಿಯೂ ಮಾತನಾಡುತ್ತಿದ್ದೇನೆಂದು ಕುಪಿತಳಾಗಬೇಡ. ತಾಯಿತಂದೆಗಳು ಮಾಡುವ ತಪ್ಪುಗಳನ್ನು ಎತ್ತಿಹಾಕಿ ಅವರನ್ನು ದೂಷಿಸುವುದು ಮಕ್ಕಳಿಗೆ ತಕ್ಕುದಲ್ಲವಾದರೂ, ನ್ಯಾಯವಿರುದ್ಧವೂ ಭಯಂಕರವೂ ಆದ ಕೃತ್ಯಗಳನ್ನು ಅವರು ಮಾಡುವಾಗ ಸುಮ್ಮನಿರದೆ ಅವರನ್ನು ಖಂಡಿಸಿ ಆದಷ್ಟು ಬುದ್ಧಿಹೇಳಿ ಅವರನ್ನು ಸನ್ಮಾರ್ಗಗಾಮಿಗಳನ್ನಾಗಿ ಮಾಡುವುದು ಸುಪುತ್ರರ ಕರ್ತವ್ಯವಾಗಿದೆ.

ರಾಣಿ—ನಾನು ಅಂತಹದ್ದೇನು ಮಾಡಿದ್ದೇನೆ ?

ಸನ್ತಾಪಕ—ಅಂತಹದ್ದೇನೂ ಮಾಡಲಿಲ್ಲವೇ ?

ರಾಣಿ—ಇಲ್ಲ ; ಮಾಡಲಿಲ್ಲ.

ಸನ್ತಾಪಕ—ತಾಯೇ, ನೀನು ನನ್ನ ಪ್ರಿಯ ತಂದೆಯನ್ನು ಎಷ್ಟುಬೇಗ ಮರೆತುಬಿಟ್ಟೆ ! ಆ ನನ್ನ ಪ್ರಿಯ ತಂದೆಯು ಕಾಲವಾಗಿ ಇನ್ನೂ ಮೂರು ತಿಂಗಳಾಗಲಿಲ್ಲವಲ್ಲಾ ! ಇಷ್ಟರಲ್ಲಿಯೇ ನೀನು ಆತನನ್ನು ಮರೆತು ನನ್ನ ತಂದೆಯ ತಮ್ಮನೂ, ದುರ್ಮಾರ್ಗಿಯೂ, ಕೊಲೆಪಾತಕನೂ ಆದ ನಿನ್ನ ಮೈದುನನನ್ನು ಪತಿಯನ್ನಾಗಿ ವರಿಸಬಹುದೇ? ನಿನ್ನಮೈದುನನು ನಿನಗೆ ಮಗನ ಸಮಾನವಲ್ಲವೇ? ಇಂತಹವನನ್ನು ವಿವಾಹವಾಗಿ ಅವನೊಡನೆ ಏಕೀಭವಿಸಿರಲು ನಿನ್ನ ಮನಸ್ಸು ಒಪ್ಪಿದುದು ಹೇಗೆ? ಇಂತಹ ಹೇಯಕೃತ್ಯವನ್ನು ಮಾಡಿ ಇಟೀ

ನಮ್ಮ ವಂಶಕ್ಕೇ ಕಳಂಕವನ್ನುಂಟುಮಾಡಿದೆಯಲ್ಲಾ ! ನೀನು ಈ ಮಹಾರಾಜ್ಯದಲ್ಲಿರುವ ಸ್ತ್ರೀಯರೆಲ್ಲರಿಗೂ ತಾಯಿಯಂತಿದ್ದುಕೊಂಡು ಸಕಲ ವಿಷಯಗಳಲ್ಲಿಯೂ ಒಳ್ಳೆಯ ಮಾದರಿಯನ್ನು ತೋರಿಸ ಬೇಕಾದುದು ನಿನ್ನ ಕರ್ತವ್ಯವಾಗಿದ್ದಿತು. ನೀನು ನಿನ್ನ ಸ್ಥಾನವನ್ನೇ ಮರೆತು ಅಲ್ಪಕಾಲದ ಭೋಗಕ್ಕಾಗಿ ಆ ದುರುಳನಾದ ಭುಜಂಗಮನ ಸವಿನುಡಿಗೆ ಕಿವಿಗೊಟ್ಟು ಅವನು ಮಾಡಿದ ಕೊಲೆಗೆಲಸದಲ್ಲಿ ಭಾಗಿ ಯಾಗಿ ನಿನ್ನ ಪಾತಿವ್ರತ್ಯವನ್ನು ಕಳೆದುಕೊಂಡೆ. ಸ್ತ್ರೀಯರೆಲ್ಲರೂ ನಿನ್ನ ಮೇಲ್ಪಂಕ್ತಿಯನ್ನೇ ಅನುಸರಿಸಿದರೆ ಲೋಕದಲ್ಲಿರುವ ಪುರುಷರ ಪಾಡೇನಾದೀತು ? ತಾಯಿಯೇ ! ನನ್ನ ಪ್ರಿಯ ತಂದೆಯು ತನ್ನ ಜೀವಿತಕಾಲದಲ್ಲಿ ನಿನ್ನನ್ನು ಎಷ್ಟರಮಟ್ಟಿಗೆ ನಂಬಿದ್ದನು ? ಹೇಗೆ ಪ್ರೀತಿಸಿದನು ? ಹೇಗೆ ಸನ್ಮಾನಿಸಿದನು ? ಇವೆಲ್ಲವನ್ನೂ ಮರೆತೆಯಾ? ಆ ದುಷ್ಟನ ಕೈಯಿಂದ ನನ್ನ ಪ್ರಿಯ ತಂದೆಯನ್ನು ಕೊಲ್ಲಿಸಲು ನನ್ನ ತಂದೆಯು ಅಂತಹ ಅಪರಾಧವನ್ನೇನು ಮಾಡಿದ್ದನು ? ಆತನನ್ನು ನೀನು ಬಿಟ್ಟು ಅರೆಘಳಿಗೆಯಾದರೂ ಇರುತ್ತಿರಲಿಲ್ಲವಲ್ಲಾ ! ಆಗ ನೀನು ನನ್ನ ತಂದೆಗೆ ತೋರಿಸುತ್ತಿದ್ದ ಪ್ರೀತಿಯನ್ನು ಕಪಟಪ್ರೀತಿ ಯೆಂದು ತಿಳಿಯಲೇ ? ನಿಮ್ಮ ವಿವಾಹಕಾಲದಲ್ಲಿ ನೀನು ನನ್ನ ತಂದೆಗೆ ಮಾಡಿದ ವಾಗ್ದಾನವನ್ನು ಬೂಟಾಟಿಕೆಯದೆನ್ನಲೇ ? ನೀನು ಅಂತಹ ಸದ್ವಂಶದಲ್ಲಿ ಹುಟ್ಟಿಯೂ ಪ್ರಯೋಜನವೇನು ? ನನ್ನ ತಂದೆಯನ್ನು ಕೊಲ್ಲಿಸಿ ಆತನನ್ನು ಕೊಂದವನೊಂದಿಗೆ ಸಂಸಾರ ಮಾಡಿಕೊಂಡು ರಾಜ್ಯವನ್ನಾಳಬೇಕೆಂದು ಎಷ್ಟು ದಿನಗಳಿಂದ ಪ್ರಯತ್ನಪಡುತ್ತಿದ್ದಿ ? ನಿನಗೆ ದೈವಭಯವಾಗಲೀ ಮಾನವಭಯ ವಾಗಲೀ ಇಲ್ಲದೇಹೋಯಿತೇ ? ಇಂತಹ ಘೋರವಾದ ಪಾಪಕೃತ್ಯ ಗಳನ್ನೆಸಗಿದ ನಿನಗೆ ದೇವರು ಎಂತಹ ನರಕವನ್ನು ಕೊಡುತ್ತಾನೋ ತಿಳಿಯದಲ್ಲಕಟಾ ! ಕರ್ಮಿಯಾದ ನಿನ್ನನ್ನು ಹೊರಲು ಭೂಮಾತೆಗೂ

ಅತಿ ಬೇಸರವಾಗಿಹೋಯಿತು. (ಒಳ ಅಂಗಿಯಿಂದ ತನ್ನ ತಂದೆಯ ಮತ್ತು ಭುಜಂಗಮನ ಚಿತ್ರಗಳನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ತೋರಿಸುತ್ತಾ) ತಾಯಿಯೇ, ಈ ಚಿತ್ರವು ಯಾರದು? ಚಿತ್ರದಲ್ಲಿರುವವನ ಹಣೆಯನ್ನು ನೋಡು, ಹುಬ್ಬನ್ನು ನೋಡು, ಕಣ್ಣುಗಳನ್ನು ನೋಡು, ಮೂಗು, ಕೆನ್ನೆ, ಬಾಯಿ, ತುಟಿಗಳನ್ನು ನೋಡು. ಶರೀರಾದ್ಯಂತವಾಗಿ ಅಂಗಾಂಗವನ್ನು ಲಕ್ಷ್ಯವಿಟ್ಟು ನೋಡು. ಆಹಾ! ಎಂತಹ ಸುರೂಪ! ಎಂತಹ ಪರಾಕ್ರಮ! ಎಂತಹ ದಾರ್ಢ್ಯ! ಎಂತಹ ಗಾಂಭೀರ್ಯ! ಅಮ್ಮಾ, ನೋಡಿದೆಯಾ? ನೋಡು, ದೃಷ್ಟಿಸಿ ನೋಡು. ಈ ಚಿತ್ರದಲ್ಲಿರುವ ಮಹಾನುಭಾವನೇ ನಿನ್ನ ನಿಜ ಪತಿಯು, ನನ್ನ ಪ್ರಿಯ ತಂದೆಯು. ಇಂತಹ ಪತಿಯನ್ನು ವಿಷಪ್ರಯೋಗದಿಂದ ಕೊಂದ "ನಿನ್ನ ತಂದೆ" ಎಂದು ನೀನು ಹೇಳುವವನ ಚಿತ್ರವನ್ನೂ ನೋಡು ಎಂದು ಭುಜಂಗಮನ ಚಿತ್ರವನ್ನು ತೋರಿಸಿ, ತಾಯೇ, ಇಂತಹ ಕೊಲೆಪಾತಕನೂ, ಭ್ರಾತೃದ್ರೋಹಿಯೂ, ಕಳ್ಳನೂ ಆದ ಇವನೊಂದಿಗೆ ಒಗತನವನ್ನು ನೀನು ಮಾಡುವುದು ಹೇಗೆ? ದುರುದ್ದೇಶದಿಂದ ಒಡಹುಟ್ಟಿದವನನ್ನೇ ಕೊಲ್ಲಲು ಹಿಂದೆಗೆಯದ ಈ ನೀಚನು ನಿನ್ನನ್ನು ಬಿಡುವನೆಂದು ನೆನಸುವೆಯಾ? ಎಂದು ಕೇಳುತ್ತಿರುವಾಗಲೇ ಪಿತೃಭೂತವು ಕೊಠಡಿಯೊಳಗೆ ಬಂದುದನ್ನು ನೋಡಿ ಭಯಕಂಪಿತನಾಗಿ—ತಂದೆಯೇ, ನೀನು ಇಲ್ಲಿಗೆ ಬರಲು ಕಾರಣವೇನು ಎಂದು ಕೇಳಿದನು. ಪಿತೃಭೂತವು—ಮಗನೇ, ನೀನು ಆ ದಿನ ರಾತ್ರೆ ನನಗೆ ಮಾಡಿದ ವಾಗ್ದಾನವನ್ನು ಮರೆತಿರಬಹುದೆಂದು ನೆನಸಿ ಮತ್ತೊಂದಾವರ್ತಿ ನಿನಗೆ ಜ್ಞಾಪಕ ಹುಟ್ಟಿಸುವುದಕ್ಕಾಗಿ ಬಂದೆನು. ನಿನ್ನ ಮಾತುಗಳಿಂದ ನಿಮ್ಮ ತಾಯಿಗೆ ಬಹಳ ಭಯವಾಗಿದೆ. ಅಲ್ಲದೆ ಕೇವಲ ಮನೋಪೀಡಿತಳಾಗಿದ್ದಾಳೆ. ಆಕೆಗೆ ಚೆನ್ನಾಗಿ ಬುದ್ಧಿ ಹೇಳು.

ಆಕೆಯು ನಿನ್ನ ತಾಯಿ. ಆಕೆಯ ಮೇಲೆ ಮಾತ್ರ ನಿನ್ನ ಕೈಯೆತ್ತ ಬೇಡ ಎಂದು ಹೇಳಿ ಮಾಯವಾಯಿತು. ಸನ್ತಾಪಕನಿಗಾಗಲೀ ಮಹಾರಾಣಿಗಾಗಲೀ ತರುವಾಯ ಭೂತವು ಕಾಣಿಸಲೇ ಇಲ್ಲ. ಸನ್ತಾಪಕನು ಭೂತದೊಂದಿಗೆ ಆಡುವ ಮಾತುಗಳು ರಾಣಿಗೆ ಕೇಳಿ ಸುತ್ತಿದ್ದುವೇ ಹೊರತು ಭೂತವೇನೂ ಕಾಣಿಸಲಿಲ್ಲ. ಸನ್ತಾಪ ಕನು ಭೂತವು ನಿಂತಿದ್ದ ಸ್ಥಳದ ಕಡೆ ನೋಡುತ್ತಾ ಸ್ವಲ್ಪ ಹೊತ್ತು ಮಾತನಾಡುತ್ತಿದ್ದುದರಿಂದ ಬುದ್ಧಿವಿಕಲ್ಪದಿಂದ ಹೀಗೆ ತಾನೇ ಮಾತನಾಡಿಕೊಳ್ಳುತ್ತಿದ್ದಾನೆಂದು ನೆನಸಿದಳು.

ಇದನ್ನು ಗ್ರಹಿಸಿದ ಸನ್ತಾಪಕನು—ಅಮ್ಮಾ, ನಾನು ಹುಚ್ಚ ನಲ್ಲ. ನಿನ್ನ ದುಷ್ಕೃತ್ಯವು ಭೂಸ್ಥಾಪನೆಯಾಗಿದ್ದ ನನ್ನ ಪ್ರಿಯ ತಂದೆಯನ್ನು ಸಹ ಪುನಹ ಇಲ್ಲಿಗೆ ಬರಮಾಡುವಷ್ಟು ಭಯಂಕರ ವಾಗಿದೆ. ನಾನು ಆ ನನ್ನ ತಂದೆಯ ಭೂತದೊಂದಿಗೆ ಮಾತಾಡು ತ್ತಿದ್ದೆನೇ ವಿನಹ ಮತ್ತೇನೂ ಇಲ್ಲ. ನಾನು ಬುದ್ಧಿವಿಕಲ್ಪ ದಿಂದೇನೂ ಮಾತನಾಡಲಿಲ್ಲ. ಬೇಕಾದರೆ ನನ್ನ ನಾಡಿಯನ್ನು ಹಿಡಿದು ಪರೀಕ್ಷಿಸಿ ನೋಡು. ಹುಚ್ಚು ಹಿಡಿದವರಿಗೆ ನಾಡಿಯು ಈ ರೀತಿ ಇರುತ್ತದೆಯೇ? ನನ್ನ ಪ್ರಿಯ ತಾಯಿಯೇ, ನನ್ನ ಪ್ರಿಯ ತಾಯಿಯೇ, ಇನ್ನಾದರೂ ನೀನು ಮಾಡಿದ ದುಷ್ಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟು ದೇವರ ಕ್ಷಮಾಪಣೆಯನ್ನು ಬೇಡಿಕೊಂಡು ಭುಜಂಗಮನ ಸಹವಾಸವನ್ನು ಬಿಡು. ಅವನ ಸಂಪರ್ಕವೇ ನಿನಗೆ ಬೇಡ. ನನ್ನ ಪ್ರಿಯ ತಂದೆಯನ್ನು ಜ್ಞಾಪಕಮಾಡಿಕೋ. ನೀನು ಆತನಿಗೆ ಮಾಡಿದ ವಾಗ್ದಾನವನ್ನು ನೆನಪುಮಾಡಿಕೋ. ಅಮ್ಮಾ, ನಾನು ಇನ್ನಾದರೂ ನಿನ್ನ ಮಗನಲ್ಲವೇ? ನನ್ನ ಮಾತನ್ನು ಅಲಕ್ಷ್ಯ ಮಾಡಿ ಮೃತಿಹೊಂದಿದ ನನ್ನ ತಂದೆಯ ಮತ್ತು ನನ್ನ ಮನಸ್ಸನ್ನು

ನೋಯಿಸಬೇಡ. ದೈವಕೋಪಕ್ಕೆ ಪಾತ್ರಳಾಗಬೇಡ, ಎಂದು ಕಣ್ಣೀರು ಸುರಿಸಿ ತಾಯಿಯ ಪಾದಗಳಮೇಲೆ ಬಿದ್ದು ಬೇಡಿಕೊಂಡನು. ಮಗನ ಮೇಲಣ ಪ್ರೇಮದಿಂದಲೋ, ತನ್ನ ದುಷ್ಕೃತ್ಯಗಳ ಅರಿವಿನಿಂದಲೋ, ಬಲಾತ್ಕಾರದಿಂದಲೋ, ಯಾವ ಕಾರಣದಿಂದಲೋ ಭುಜಂಗಮನ ಸಹವಾಸವನ್ನೂ ಅವನೊಂದಿಗೆ ಒಗತನವನ್ನೂ ಬಿಟ್ಟುಬಿಡುತ್ತೇನೆಂದು ಮಗನಿಗೆ ವಾಗ್ದಾನ ಮಾಡಿದಳು. ತಾಯಿಯ ವಿಷಯದಲ್ಲಿ ಅಲ್ಪಸ್ವಲ್ಪ ತೃಪ್ತಿಯಿದ್ದಾಗ್ಯೂ ಪಿತೃಭೂತಕ್ಕೆ ಮಾಡಿದ ವಾಗ್ದಾನವನ್ನು ನೆರವೇರಿಸುವ ವಿಷಯವನ್ನೇ ಯೋಚಿಸುತ್ತಾ ಕೊಠಡಿಯಿಂದ ಹೊರಗೆ ಬರುವಾಗ ತನ್ನಿಂದ ಮೃತರಾದವರು ಯಾರಿರಬಹುದೆಂದು ಪುನಹ ಒಳಗೆ ಹೋದನು. ಇಷ್ಟರಲ್ಲಿ ತಾಯಿಯು ಆ ಕೊಠಡಿಯಲ್ಲಿರಲಿಲ್ಲ. ಸನ್ತಾಪಕನು ಪ್ರೇತವು ಬಿದ್ದಿದ್ದ ಸ್ಥಳಕ್ಕೆ ಹೋಗಿ ನೋಡಿ ತನ್ನಿಂದ ಮೃತನಾದವನು ತನ್ನ ಪ್ರಿಯಳಾದ ಪುಷ್ಪಮಾಲಿನಿಯ ತಂದೆ ಕುತಂತ್ರಿಕನೆಂದು ತಿಳಿದು ಆತುರದಿಂದ ತಾನು ಮಾಡಿದ ಕ್ರೂರಕೃತ್ಯಕ್ಕಾಗಿಯೂ, ಪ್ರಿಯಳ ಮೇಲಣ ಪ್ರೇಮಕ್ಕಾಗಿಯೂ ಬಹಳವಾಗಿ ಗೋಳಾಡಿದನು.

---

# ಅಧ್ಯಾಯ 7

## ಭುಜಂಗಮನ ದುಸ್ಸಂಕಲ್ಪ.

ಆಪ್ತಮಂತ್ರಿಯಾದ ಕುತಂತ್ರಿಕನ ಮರಣವಾರ್ತೆಯನ್ನು ಕೇಳಿದ ಭುಜಂಗಮನು ಸಿಡಿಲುಬಡಿದ ವೃಕ್ಷದಂತೆ ಮೂರ್ಛೆಯಿಂದ ಭೂಮಿಗೊರಗಿದನು. ಸಮೀಪದಲ್ಲಿಯೇ ಇದ್ದ ಮಹಾರಾಣಿ ಕಪಟಾವತಿಯು ಅನೇಕ ಪರಿಯಿಂದ ಶೈತ್ಯೋಪಚಾರ ಮಾಡಿದಾಗ್ಯೂ ಅಚೇತನನಾಗಿಯೇ ಬಿದ್ದಿದ್ದನು. ಕಪಟಾವತಿಗಂತೂ ಕೈಕಾಲುಗಳು ತಣ್ಣಗಾದವು. ಮನಸ್ಸಿನಲ್ಲಿ ಅನೇಕ ಯೋಚನೆಗಳು ತಲೆದೋರಿದವು. ಈ ಮಧ್ಯೆ ಮಗನಾದ ಸನ್ತಾಪಕನ ಬುದ್ಧಿವಾದಗಳು ಕಿವಿಗಳನ್ನು ಕೊರೈಸುತ್ತಿದ್ದವು. ಆದಾಗ್ಯೂ ಏನು? “ಕೋಣನ ಮುಂದೆ ಕಿನ್ನರಿ ಬಾರಿಸಿದಂತೆಯೇ,” “ಹಂದಿಯ ಮುಂದೆ ಮುತ್ತು ಚೆಲ್ಲಿದಂತೆಯೇ,” ನಿಜಪತಿಯ ಮೇಲಣ ಪ್ರೇಮಕ್ಕಿಂತಲೂ ಈಗಿನವನ ಮೇಲೆ ಪಂಚಪ್ರಾಣ. ಕಪಟಸ್ತ್ರೀಯರ ನಾಟಕದ ವರ್ಣನೆಯನ್ನು ಯಾರುತಾನೇ ವರ್ಣಿಸಲು ಸಾಧ್ಯವಾದೀತು! ಘಾಬರಿಯಿಂದ ತಾರಾಡುವುದರೊಳಗಾಗಿ ಭುಜಂಗಮನಿಗೆ ಪ್ರಜ್ಞೆ ಬಂದಿತು. ಕಪಟಾವತಿಗೆ ಸಂತೋಷವುಂಟಾಯಿತು. ತನ್ನ ಎಲ್ಲಾ ದುಷ್ಕಾರ್ಯಗಳಲ್ಲಿಯೂ ದುರಾಲೋಚನೆಗಳಲ್ಲಿಯೂ ಸಹಾಯಕನಾಗಿದ್ದ ಕುಕಂತ್ರಿಕನ ಮರಣವು ಇವನನ್ನು ಜೀವಾಂತ್ಯ ಸಂಕಟಕ್ಕೆ ಈಡುಮಾಡಿತು. ಇನ್ನುಮುಂದೆ ನನ್ನ ಯಾವತ್ತು ಕೆಲಸಗಳಿಗೆ ಪ್ರೋತ್ಸಾಹಕರೇ ಇಲ್ಲದಂತಾಯಿತಲ್ಲಾ! ಏನು ಮಾಡಲಿ? ಇಂತಹ ಆಪ್ತನು ಸಿಕ್ಕುವುದೆಂದರೇನು? ಎಂದು ಬಹಳವಾಗಿ ದುಃಖಪಟ್ಟನು.

ಇದು ಮಾತ್ರವಲ್ಲದೆ ಕಪಟಾವತಿಯು ತನಗೂ ತನ್ನಮಗನಿಗೂ ನಡೆದ ಪ್ರಸ್ತಾಪವನ್ನೆಲ್ಲಾ ಪತಿಗೆ ಹೇಳಿಬಿಟ್ಟಳು. ತನ್ನ ದುಷ್ಕೃತ್ಯವು ಬಯಲಿಗೆ ಬಂದಿತಲ್ಲಾ! ಸಸ್ತ್ರಾಪಕನಿಂದಲೂ ಪ್ರಜೆಗಳಿಂದಲೂ ತನಗೆ ಯಾವ ಗಳಿಗೆಯಲ್ಲಿ ಎಂತಹ ವಿಪತ್ತು ಬರುವುದೋ ಎಂದು ಭುಜಂಗಮನು ಕಂಪಿಸುವವನಾದನು. ಸಸ್ತ್ರಾಪಕನನ್ನು ಎರಡಾಗಿ ಸೀಳಿಬಿಡುವಷ್ಟು ಕೋಪವಿದ್ದಾಗ್ಯೂ ಪ್ರಜೆಗಳ ಪ್ರೀತಿ ಗೌರವಗಳಿಗೆ ಪಾತ್ರನಾಗಿದ್ದುದರಿಂದ ಅವನ ಯತ್ನವು ಸಾಗದಿದ್ದಿತು. ಎಷ್ಟು ಬಗೆಯಿಂದ ಯೋಚಿಸಿದರೂ ಕಡೆಗೆ ನಿಷ್ಪ್ರಯೋಜನವೇ. ಕಡೆಗೆ ಒಂದು ಯುಕ್ತಿಯನ್ನಾಲೋಚಿಸಿ ಕಪಟಾವತಿಯನ್ನು ಕುರಿತು—

ಪ್ರಿಯೆ, ನಿನ್ನ ಮಗನು ಮಾಡಿರುವ ಕೆಲಸವು ಮಹಾ ಭಯಂಕರವಾದುದು; ನ್ಯಾಯವಿರುದ್ಧವಾದುದು. ಸಾಧಾರಣ ಪ್ರಜೆಗಳಲ್ಲಿ ಯಾರಾದರೂ ಒಬ್ಬರನ್ನು ಕೊಲೆಮಾಡಿದರೆ ಅಂತಹವರಿಗೆ ಮರಣದಂಡನೆಯು ತಪ್ಪಿದ್ದಲ್ಲ. ಇದರಲ್ಲಿಯೂ ನಿನ್ನ ಮಗನು ರಾಜ್ಯದ ಪ್ರಧಾನಮಂತ್ರಿಯನ್ನೇ ಬಹು ಕ್ರೂರತರವಾಗಿ ನಿನ್ನ ಕಣ್ಣೆದುರಿನಲ್ಲಿಯೇ ಕೊಲೆಮಾಡಿರುತ್ತಾನೆ. ಮಂತ್ರಿಯ ಕಡೆಯುವರು ಈ ವಿಷಯವನ್ನು ವಿಚಾರಣೆಮಾಡಬೇಕೆಂದು ನ್ಯಾಯಸ್ಥಾನಕ್ಕೆ ಬಂದರೆ ನಿಜವಾಗಿಯೂ ನಿನ್ನ ಮಗನಿಗೆ ಮರಣದಂಡನೆಯು ತಪ್ಪಿದ್ದಲ್ಲ. ಈ ವಿಷಯದಲ್ಲಿ ಈಗಾಗಲೇ ಪ್ರಯತ್ನಗಳು ನಡೆಯುತ್ತಿವೆಯೆಂದು ವರ್ತಮಾನವಿದೆ. ನ್ಯಾಯಕ್ಕಾದರೋ ಪಕ್ಷಪಾತವೇ ಇಲ್ಲ. ನಮ್ಮ ಮಗನ ತಲೆಯನ್ನು ಮಾರೆಕಾರರು ಹೊಡೆಯುತ್ತಿರುವಾಗ ನಾವು ನೋಡಿಕೊಂಡು ಸಹಿಸುವುದೆಂತು? ಸಹಿಸುವುದು ನನಗೇ ಸಾಧ್ಯವಾಗದಿರುವಲ್ಲಿ ಹೆತ್ತತಾಯಿಯಾದ ನೀನು ಆ ದುಃಖವನ್ನು ಸಹಿಸುವುದು ಸಾಧ್ಯವೇ? ಏನು ಮಾಡೋಣ? ಇದಕ್ಕೆ ಉಪಾಯ್ಯವೇನು? ಎಂದು ಕೇಳಿದನು.

ಕಪಟಾವತಿ—ಪ್ರಿಯಾ, ನಿಮ್ಮ ಮಾತೇನೋ ನಿಜವೇ. ಆ ದುಃಖವನ್ನು ಸಹಿಸುವುದು ಕಷ್ಟ. ನಾನೋ ಅಬಲೆಯು. ನಿಮ್ಮಂತಹ ಜ್ಞಾನಿಗಳಿಗೆ ತಿಳಿಯದ ಉಪಾಯಗಳು ನನಗೆ ತಿಳಿಯುವುದು ಹೇಗೆ? ನೀವೇ ಯಾವುದಾದರೂ ಒಂದು ಹಂಚಿಕೆಯಿಂದ ನನ್ನ ಮಗನ ಪ್ರಾಣವನ್ನು ಕಾಪಾಡಿರಿ ಎಂದು ಹೇಳಿದಳು.

ಭುಜಂಗನು—(ಸ್ವಲ್ಪಹೊತ್ತು ಆಲೋಚಿಸುವವನಂತೆ ನಟಿಸಿ ತರುವಾಯ) ಪ್ರಿಯೇ, ನನಗಾದರೋ ಒಂದು ಯೋಚನೆಯು ಹೊಳೆಯುತ್ತಿದೆ; ಆದರೆ ನೀನು ಅದಕ್ಕೆ ಸಮ್ಮತಿಸುವೆಯೋ ಇಲ್ಲವೋ ನಾನು ಹೇಳಲಾರೆನು.

ಕಪಟಾವತಿ—ಆ ಯೋಚನೆ ಏನು? ಸಮ್ಮತಿಸುವುದಾಗಿದ್ದರೆ ಯಾಕೆ ಆಗಬಾರದು? ಅದೇನು ಹೇಳಿ.

ಭುಜಂಗನು—ಪ್ರಿಯೆ, ನಮ್ಮ ರಾಜ್ಯವೋ ಬಹು ವಿಸ್ತಾರವಾದ ರಾಜ್ಯವು. ಅನೇಕ ದೇಶಗಳು ನಮ್ಮ ರಾಜ್ಯಾಧೀನವಾಗಿವೆ. ಸಾಮಂತರಾಜರು ನಾವು ಹೇಗೆ ಹೇಳಿದರೆ ಹಾಗೆ ಕೇಳುತ್ತಾರೆ. ಆದುದರಿಂದ ಪಟ್ಟಣದಲ್ಲಿ ಪ್ರಧಾನಮಂತ್ರಿಯ ಕೊಲೆಯ ವಿಷಯದಲ್ಲಿ ಗಲಭೆಯಾಗುವ ಮೊದಲೇ ನಮ್ಮ ಕುಮಾರನನ್ನು ಯಾವುದಾದರೂ ಒಂದು ದೇಶಕ್ಕೆ ಕಳುಹಿಸಿಬಿಡೋಣ. ಅಲ್ಲಿನ ಸಾಮಂತರಾಜನು ಬಹು ಮರ್ಯಾದೆಯಿಂದ ನೋಡಿಕೊಳ್ಳುವಂತೆ ಅಪ್ಪಣೆಕೊಡುತ್ತೇನೆ. ಗದ್ದಲವೆಲ್ಲಾ ತಣ್ಣಗಾಗುವವರೆಗೂ ಮಗನು ಅಲ್ಲೇ ಇರಲಿ. ಅಷ್ಟರಲ್ಲಿ ಗಾಳೀ ಬದಲಾವಣೆಯಿಂದ ಅವನ ದೇಹಕ್ಕೂ ಆರೋಗ್ಯವಾಗಬಹುದು. ತರುವಾಯ ಇಲ್ಲಿಗೆ ಕರೆಸಿಕೊಂಡು ಅವನ ವಿವಾಹಕಾರ್ಯಕ್ಕೆ ಅಣಿಮಾಡಲಾದೀತು ಎಂದು ಹೇಳಿದನು. ಇವನ್ನು ಕೇಳಿ ಕಪಟಾವತಿ—ಪ್ರಿಯಾ, ಇದು ಬಹು ಒಳ್ಳೇ

ಯೋಚನೆ. ಇದಕ್ಕೆ ಅವಶ್ಯವಾದ ಏರ್ಪಾಡುಗಳನ್ನು ಮಾಡಿ ಸಾಧ್ಯವಾದಷ್ಟು ಬೇಗನೆ ಕಳುಹಿಸಿ ನನ್ನ ಮಗನ ಪ್ರಾಣಸಂರಕ್ಷಣೆಮಾಡಿ. ಒಳ್ಳೇ ಯೋಚನೆ, ಬಹಳ ಒಳ್ಳೇ ಯೋಚನೆ, ಎಂದು ಹೇಳಿ ತನ್ನ ಕೊಠಡಿಗೆ ಹೊರಟುಹೋದಳು.

ಇತ್ತ ಭುಜಂಗಮನು "ರೊಟ್ಟಿ ಜಾರಿ ತುಪ್ಪದಲ್ಲಿಯೇ ಬಿದ್ದಿತೆಂದು" ಸಂತೋಷಪಟ್ಟು, ಮನಸ್ಸಿನಲ್ಲಿ ನಾನು ಮಾಡಿದ ಕಾರ್ಯಗಳೆಲ್ಲಾ ಈ ಸನ್ತ್ರಾಪಕನಿಗೆ ಹೇಗೆ ತಿಳಿದಿರಬೇಕು? ಯಾರಿಗೂ ತಿಳಿಯುದೆಂದಿದ್ದೆನಲ್ಲಾ! ಆ ನಾಟಕದವರಿಗೆ ಇವನು ಹೇಳಿಕೊಟ್ಟು, ಬೇಕೆಂದು ಆ ನಾಟಕರೂಪದಲ್ಲಿ ನನ್ನ ದುಷ್ಕೃತ್ಯಗಳನ್ನು ನನ್ನ ಪ್ರಜೆಗಳೆದುರಿನಲ್ಲಿ ನನಗೆ ಪ್ರದರ್ಶಿಸಿರುತ್ತಾನೆ. ಇವನಿಗೆ ತಿಳಿಯುದಿದ್ದರೆ ತನ್ನ ತಾಯಿಯನ್ನು ಈ ರೀತಿ ಖಂಡಿಸುತ್ತಿದ್ದನೇ? ಇನ್ನು ಇವನನ್ನು ಜೀವದಿಂದಿರಿಸಬಾರದು. ಹಾಗೇನಾದರೂ ನಾನು ಮಾಡಿದ್ದೇ ಆದರೆ ನನಗೇ ಅಪಾಯು. ಪ್ರಜೆಗಳಿಗೆ ಇವನಲ್ಲಿ ಅತ್ಯಂತ ಪ್ರೇಮ. ಇವನೇನಾದರೂ ನನ್ನ ದುಷ್ಕೃತ್ಯಗಳನ್ನು ಬಹಿರಂಗಪಡಿಸಿದ್ದೇ ಆದರೆ ನನ್ನ ಶರೀರವು ಹದ್ದುಕಾಗೆಗಳ ಪಾಲಾಗುವುದೇನೋ ನಿಜ. ಇವನಿಗೋಸ್ಕರ ಪ್ರಜೆಗಳು ತಮ್ಮ ಪ್ರಾಣಗಳನ್ನಾದರೂ ಕೊಡಲು ಸಿದ್ಧರಾಗಿದ್ದಾರೆ. ಪ್ರಜೆಗಳು ತಿರಿಗಿಬಿದ್ದಮೇಲೆ ನನ್ನದೇನೂ ನಾಗುವುದಿಲ್ಲ. ಇಂತಹ ಆಪತ್ತಿಗೆ ನಾನು ತುತ್ತಾಗುವುದಕ್ಕೆ ಮೊದಲೇ ಎಚ್ಚರಗೊಂಡು ಇವನ ಶಿರಚ್ಛೇದನವನ್ನು ಉಪಾಯಾಂತರದಿಂದ ಮಾಡಿಸಲೇಬೇಕು ಎಂದು ನಿರ್ಧರಿಸಿ, ಎಲಾ, ಯಾರಲ್ಲಿ?

ಸೇವಕ—ಬುದ್ಧೀ, ಅಪ್ಪಣೆ.

ಭುಜಂಗಮ—ಬೇಗ ಹೋಗಿ, ಸೈನ್ಯಾಧಿಕಾರಿಗಳಲ್ಲಿ ಯಾರನ್ನಾದರೂ ಇಬ್ಬರನ್ನು ಕರೆದುಕೊಂಡು ಬಾ, ಹೋಗು; ಬೇಗ ಹೋಗು.

ಸೇವಕ—ಅಪ್ಪಣೆ, ಎಂದು ಹೋಗಿ ಇಬ್ಬರನ್ನು ಕರೆದು ಕೊಂಡು ಬಂದು ಅರಸನಾದ ಭುಜಂಗಮನ ಎದುರಿನಲ್ಲಿ ನಿಲ್ಲಿಸಿದನು.

ಭುಜಂಗಮ— ಎಲೈ ಸೈನ್ಯಾಧಿಕಾರಿಗಳೇ, ನೀವಿಬ್ಬರೂ ನಾಳೆ ಬೆಳಿಗ್ಗೆ ಯುವರಾಜನನ್ನು ನಿಮ್ಮ ಜೊತೆಯಲ್ಲಿಯೇ ಕರೆದು ಕೊಂಡು ಹೋಗಿ ರವಿನಗರದಲ್ಲಿ ಬಿಟ್ಟು ಬನ್ನಿ. ಅಲ್ಲಿನ ನಮ್ಮ ಸಾಮಂತರಾಜನಿಗೆ ಒಂದು ಲೇಖನವನ್ನು ಕೊಡುತ್ತೇನೆ. ದಾರಿ ಯಲ್ಲಿ ಯಾವ ಅಪಾಯವೂ ಆಗದಂತೆ ಎಚ್ಚರಿಕೆಯಿಂದ ನೋಡಿ ಕೊಳ್ಳಿ. ತಿಳಿಯಿತೋ ?

ಅಧಿಕಾರಿಗಳು— ಮಹಾಪ್ರಭೂ, ತಿಳಿಯಿತು, ಅಪ್ಪಣೆ. ಸಿದ್ಧವಾಗುತ್ತೇವೆ ಎಂದು ಹೊರಟುಹೋದರು.

ತರುವಾಯ ಭುಜಂಗಮನು ಸಸ್ತ್ರಾಪಕನನ್ನು ಕರೆಯಿಸಿ, ಕುಮಾರಾ, ನೀನು ಪ್ರಧಾನಮಂತ್ರಿಯಾದ ಕುತಂತ್ರಿಕರಾಯನನ್ನು ಕೊಂದು ಬಹು ಭಯಂಕರವಾದ ತಪ್ಪುಮಾಡಿದಿ. ನಿನ್ನನ್ನು ನ್ಯಾಯಸ್ಥಾನಕ್ಕೆ ಎಳೆದು ಮರಣದಂಡನೆಯನ್ನು ವಿಧಿಸಬೇಕೆಂದು ಮಂತ್ರಿಯ ಕಡೆಯವರು ಪ್ರಯತ್ನಮಾಡುತ್ತಿದ್ದಾರೆ. ಹಾಗೇ ನಾದರೂ ನ್ಯಾಯತಃ ನಿನಗೆ ಮರಣದಂಡನೆಯಾದರೆ ತಾಯಿ ತಂದೆ ಗಳಾದ ನಾವು ಕಣ್ಣಿಂದ ನೋಡಿ ಸಹಿಸಲಾರೆವು. ಈ ಗದ್ದಲ ವೆಲ್ಲಾ ಮರೆತು ಹೋಗುವವರಿಗೂ ನೀನು ರವಿನಗರದಲ್ಲಿರು. ಈ ವಿಷಯದಲ್ಲಿ ಅಲ್ಲಿನ ಅರಸನಿಗೆ ಕಾಗದವನ್ನು ಬರೆದಿರುತ್ತೇನೆ. ನೀನು ಯಾವುದಕ್ಕೂ ಕೊರತೆಪಡಲವಶ್ಯವಿಲ್ಲ. ಆತನು ನಮ್ಮ ಸಾಮಂತರಾಜನಷ್ಟೆ. ಅಲ್ಲದೆ ನಿನ್ನ ದೇಹಾರೋಗ್ಯಕ್ಕೂ ಅಲ್ಲಿನ ಗಾಳಿಯು ಅನುಕೂಲವಾಗಿಯೇ ಇದೆ. ನಿನ್ನ ಮೈಗಾವಲಿಗಾಗಿ ಇಬ್ಬರು ಅಧಿಕಾರಿಗಳು ನಿನ್ನೊಡನೆ ಬರುತ್ತಾರೆ. ಪ್ರಯಾಣಕ್ಕೆ

ಎಲ್ಲವೂ ಅಣಿಯಾಗಿವೆ. ನಾಳೆಪ್ರಾತಃಕಾಲವೇ ಹೊರಟುಹೋಗು. ಯಾವುದಕ್ಕೂ ಚಿಂತಿಸಬೇಡ. ಮಂತ್ರಿಯ ಕಡೆಯವರ ಕೋಪ ವನ್ನು ಶಾಂತಿಪಡಿಸಿ ನಿನ್ನನ್ನು ಬೇಗನೆ ಕರೆಯಿಸಿಕೊಳ್ಳುತ್ತೇನೆ ಎಂದು ಹೇಳಿದನು.

ಸನ್ತಾಪಕನು ವಿಶೇಷಮಾತಾಡದೆ, ಒಳ್ಳೇದು, ಎಂದು ಹೇಳಿ ತನ್ನ ಕೊಟಡಿಗೆ ಹೋಗಿ ಪ್ರಯಾಣಕ್ಕಾಗಿ ಸಿದ್ಧನಾಗಲುದ್ಯುಕ್ತ ನಾದನು.

ಇಷ್ಟರಲ್ಲಿ ಸಾಯಂಕಾಲ ಎಂಟು ಘಂಟೆಯಾಯಿತು. ಎಂದಿ ನಂತೆ ಮಿತ್ರನಾದ ಸೌಮಿತ್ರಕನು ಯುವರಾಜನ ದರ್ಶನಕ್ಕಾಗಿ ಬಂದನು. ಯುವರಾಜನಾದರೋ ಮಹಾ ಚಿಂತಾಕ್ರಾಂತನಾಗಿ ಕುಳಿತಿದ್ದನು. ಪೆಟ್ಟಿಗೆಗಳೂ ಬಟ್ಟೆಗಳೂ ಕೊಠಡಿಯ ಮಧ್ಯದಲ್ಲಿ ಕ್ರಮತಪ್ಪಿ ಬಿದ್ದಿದ್ದುವು. ಕೊಠಡಿಯ ಸಾಮಾನುಗಳು ಹೀಗೆ ಕ್ರಮವಿಲ್ಲದ ರೀತಿಯಲ್ಲಿ ಇರುವುದನ್ನೂ ಸನ್ತಾಪಕನ ಮುಖಕಮ ಲವು ಬಾಡಿ ಬತ್ತಿರುವುದನ್ನೂ ನೋಡಿ ಆಶ್ಚರ್ಯಗೊಂಡು—ಯುವ ರಾಜಾ, ಇದೇನು ಹೀಗೆ ಕೂತಿರುವಿ ? ಸಾಮಾನುಗಳೆಲ್ಲಾ ಏಕೆ ಹೀಗೆ ಬಿದ್ದಿವೆ ? ಸೇವಕರು ಯಾರೂ ಇಲ್ಲವಲ್ಲಾ ! ಏನು ಸಂಗತಿ?

ಸನ್ತಾಪಕ—ಮಿತ್ರಾ, ನಾನೇನುಹೇಳಲಿ ? ಎಡವಿದಕಾಲಿಗೇ ಮುಳ್ಳುಮುರಿಯಿತೆಂಬ ಗಾದೆಯು ಸುಳ್ಳಲ್ಲ.

ಸೌಮಿತ್ರಕ— ಸರಿಯಾಗಿ ತಿಳಿಯುವಂತೆ ಹೇಳು, ಯುವ ರಾಜಾ, ಆ ಮುಳ್ಳು ಯಾವುದು ? ನನಗೆ ಮರೆಮಾಚದೆ ಹೇಳು.

ಸನ್ತಾಪಕ— ನಾನು ದೇಶಭ್ರಷ್ಟನಾಗಿ ಹೋಗಬೇಕೆಂಬ ಚಿಂತೆಯೇ ಆ ಮುಳ್ಳು. ಮಿತ್ರಾ, ತಿಳಿಯಿತೇ ! ತಿಳಿಯಿತೇ !

ಸೌಮಿತ್ರಕ— ಏನು, ದೇಶಭ್ರಷ್ಟನಾಗಬೇಕೇ ? ಇದಕ್ಕೆ ಕಾರಣವೇನು ?

ಸನ್ತಾಪಕ—ನಾನು ನಮ್ಮ ತಾಯಿಗೆ ಬುದ್ಧಿ ಹೇಳಿದುದೂ, ಪ್ರಿಯಳಾದ ಪುಷ್ಪಮಾಲಿನಿಯ ತಂದೆಯಾದ ಕುತಂತ್ರಿಕರಾಯ ನನ್ನು ಅಚಾತುರ್ಯದಿಂದ ಕೊಂದುದೂ ನಿನಗೆ ತಿಳಿಯದ ಸಂಗತಿ ಯಲ್ಲವಷ್ಟೆ. ಈ ದಿನ ಸಾಯಂಕಾಲ ಮೂರು ಘಂಟೆಯಲ್ಲಿ ನೀನು ಇಲ್ಲಿಂದ ಹೋದ ತರುವಾಯ ಭುಜಂಗನು ನನ್ನನ್ನು ಕರೆಸಿ, ಮಂತ್ರಿಯ ಕಡೆಯವರು ನಾನು ಅಚಾತುರ್ಯದಿಂದ ಮಾಡಿದ ಕಾರ್ಯಕ್ಕಾಗಿ ನನ್ನನ್ನು ನ್ಯಾಯಸ್ಥಾನಕ್ಕೆಳೆದು ಮರಣದಂಡನೆ ಯನ್ನು ಕೊಡಿಸಬೇಕೆಂಬ ಪ್ರಯತ್ನಮಾಡುತ್ತಿದ್ದಾರೆಂತಲೂ, ನನ್ನ ಪ್ರಾಣರಕ್ಷಣೆಗಾಗಿ ರಾಜ್ಯವನ್ನು ಬಿಟ್ಟು ರವಿನಗರಕ್ಕೆ ಹೋಗಿ ತಾನು ಅಪ್ಪಣೆಕೊಡುವವರೆಗೂ ಅಲ್ಲೇ ಇರಬೇಕೆಂತಲೂ ಹೇಳಿದನು. ನಾನೇನು ಮಾಡಲಿ? ನನ್ನ ಪ್ರಿಯ ತಂದೆಯು ಮೃತನಾದುದ ರಿಂದಲ್ಲವೇ ನಾನು ಪರದೇಶಿಯಾಗುವ ಹೊತ್ತು ಬಂದಿತು! ಪರರ ಅಧೀನದಲ್ಲಿರಬೇಕಾಯಿತು! ಸ್ವರಾಜ್ಯವನ್ನೂ ಸ್ವಜನರನ್ನೂ ಬಿಡಬೇಕಾಯಿತು ಎಂದು ಕಣ್ಣೀರಿಟ್ಟನು ಯುವರಾಜನ ದುಃಖ ವನ್ನು ನೋಡಿ ಸೌಮಿತ್ರಕನಿಗೆ ಸಹಿಸಲಾಗಲಿಲ್ಲ. ಯುವರಾಜನು ರಾಜ್ಯವನ್ನು ಬಿಡುವ ಸುದ್ದಿಯನ್ನು ಕೇಳಿದ ಕೂಡಲೇ ಹೃದಯವು ಸೀಳಿದಂತಾಯಿತು. ಮಾತನಾಡಲು ಬಾಯಿ ಬರಲಿಲ್ಲ. ಕೆಲವು ನಿಮಿಷಗಳಾದ ತರುವಾಯ—ಯುವರಾಜಾ, ನಿನ್ನ ಹಿತಚಿಂತನೆ ಯಿಂದ ನಿಮ್ಮ ಚಿಕ್ಕಪ್ಪನು ಹೀಗೆ ಮಾಡಿದ್ದಾನೆಂದು ತಿಳಿದಿ ದ್ದೀಯಾ?

ಸನ್ತಾಪಕ—ನಾನೆಂದಿಗೂ ಹಾಗೆ ತಿಳಿದಿಲ್ಲ ಮತ್ತು ನಂಬು ವುದೂ ಇಲ್ಲ. ಬೇರೆ ಯಾವುದೋ ಕಾರಣವಿರಬೇಕು. ಅವನು ಮಹಾ ತಂತ್ರಿಯು. ನಮ್ಮ ತಾಯಿಯು ನಾನು ಆಕೆಗೆ ಹೇಳಿದ ಸಂಗತಿಗಳನ್ನೆಲ್ಲಾ ಅವನಿಗೆ ಹೇಳಿರುವುದರಿಂದ, ನಾನು ಇಲ್ಲಿದ್ದರೆ

ಅವನಿಗೆ ಗಂಡಾಂತರವೆಂದು ತಿಳಿದು ಈ ಉಪಾಯವನ್ನು ಹುಡುಕಿ ರುತ್ತಾನೆಂದು ಭಾವಿಸುತ್ತೇನೆ.

ಸೌಮಿತ್ರಕ—ಇದ್ದರೂ ಇರಬಹುದು. ಆದರೆ, ಬಾಲ್ಯ ದಿಂದಲೂ ಮಿತ್ರರಾಗಿದ್ದ ನಾವು ಅಗಲಿರುವುದುಹೇಗೆ? ಇದು ನನಗೆ ಬಹಳ ಸಂಕಟವನ್ನುಂಟುಮಾಡುವುದಾಗಿದೆ. ನಿನ್ನ ಜೊತೆಯಲ್ಲಿಯೇ ಬರುವೆನು, ಅಪ್ಪಣೆ ಕೊಡು.

ಸನ್ತಾಪಕ—ಮಿತ್ರಾ, ಬೇಡ. ನೀನು ನನ್ನ ಹಿಂದೆ ಬಂದು ನನಗೆ ಮಾಡುವ ಸಹಾಯೋಪಕಾರಗಳಿಗಿಂತಲೂ ಇಲ್ಲಿದ್ದುಕೊಂಡು ಮಾಡುವ ಸಹಾಯವು ಅಧಿಕವಾಗಿದೆ.

ಸೌಮಿತ್ರಕ—ಯುವರಾಜಾ, ಅದು ಹೇಗೆ?

ಸನ್ತಾಪಕ—ನಾನು ಹೋದ ತರುವಾಯ ಇಲ್ಲಿನ ಸಂಗತಿ ಗಳನ್ನು ಆಗಿಂದಾಗ್ಗೆ ತಿಳಿಸುವುದೇ. ನಾನು ನಾಳೆ ಪ್ರಾತಃಕಾಲವೇ ಹೊರಡುತ್ತೇನೆ. ಭುಜಂಗಮನ ಅಪ್ಪಣೆ ಇದು. ಯತ್ನವಿಲ್ಲ, ಏನು ಮಾಡಲಿ? ನಾನು ಯಾವ್ಯಾವ ಕಾಲದಲ್ಲಿ ಯಾರ್ಯಾರ ಮೂಲಕ ಏನೇನು ಅನುಭವಿಸಬೇಕೆಂಬ ದೈವಸಂಕಲ್ಪವಿದೆಯೋ ಅವೆಲ್ಲ ವನ್ನೂ ಅನುಭವಿಸಲು ಸಿದ್ಧನಾಗಿಯೇ ಇದ್ದೇನೆ. ಅದನ್ನು ತಪ್ಪಿಸಿ ಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಈಗ ಬಹಳ ರಾತ್ರಿಯಾ ಗುತ್ತಾ ಬಂದಿತು. ಮಿತ್ರನೇ, ನಿಮ್ಮ ಮನೆಯವರು ಕಾದಿರ ಬಹುದು. ನೀನಿಲ್ಲಿರುವಷ್ಟೂ ನನ್ನ ದುಃಖವು ಇಮ್ಮಡಿಸುತ್ತದೆ; ಸಹಿಸಲು ಸಾಧ್ಯವಿಲ್ಲ. ಬಾಲ್ಯಮಿತ್ರನಾದ ನಿನ್ನನ್ನಗಲುವುದು ನನಗೆ ಕೇವಲ ಸಂಕಟವನ್ನುಂಟುಮಾಡುತ್ತಿದೆ. ನಾನು ಹೋಗಿ ಅಲ್ಲಿನ ಸಂಗತಿಗಳಿಗೆ ಬರೆಯುತ್ತೇನೆ. ನೀನು ಮಾತ್ರ ಇಲ್ಲಿನ ಸಂಗತಿ ಗಳನ್ನು ಆಗಿಂದಾಗ್ಗೆ ತಿಳಿಸಲು ಮರೆಯಬೇಡ, ಹೋಗಿ ಬಾ.

ಸೌಮಿತ್ರಕ—ಯುವರಾಜಾ, ಹೋಗಿಬರುತ್ತೇನೆ ಎಂದು ಹೇಳಿ ಹಸ್ತಲಾಘವನ್ನಿತ್ತು ಬೀಳ್ಕೊಂಡನು.

ಇತ್ತ ಸನ್ತಾಪಕನು ತನ್ನ ಮಿತ್ರನು ಅದೃಶ್ಯನಾಗುವವರೆವಿಗೂ ಆವನನ್ನು ನೋಡುತ್ತಿದ್ದು ತರುವಾಯ ತನ್ನ ಕೊಠಡಿಯಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತು ಕಿಟಕಿಯನ್ನು ತೆರೆದು ಉದ್ಯಾನವನದಲ್ಲಿ ತನ್ನ ಪ್ರಿಯ ತಂದೆಯು ಮೃತನಾದ ಸ್ಥಳವನ್ನು ನೋಡಿ ಆತನ ನೆನಪಿನಿಂದ ಕಣ್ಣೀರಿಟ್ಟನು. ಇಷ್ಟರಲ್ಲಿ ಬಹಳ ರಾತ್ರಿಯಾಗಿದ್ದುದರಿಂದ ಅರಮನೆಯ ದೀಪಗಳೆಲ್ಲಾ ಆರಿಹೋಗಿ ಎಲ್ಲೆಲ್ಲಿಯೂ ಕತ್ತಲೆಯಾಗಿದ್ದಿತು. ಹೋಗಿ ತನ್ನ ಹಾಸಿಗೆಯಮೇಲೆ ಮಲಗಿಕೊಂಡನು. ನಿದ್ರೆಯೇ ಬಾರದು. ಅನೇಕ ತರವಾದ ಯೋಚನೆಗಳು. ಇದ್ದಕ್ಕಿದ್ದ ಹಾಗೆ ತನ್ನ ಪ್ರಿಯಳಾದ ಪುಷ್ಪಮಾಲಿನಿಯ ನೆನಪಾಗಿ ಬಹಳ ದುಃಖಿಸಿದನು. ತಾನು ತನ್ನ ಪ್ರಿಯಳ ತಂದೆಯಾದ ಕುತಂತ್ರಿಕನನ್ನು ಕೊಂದದ್ದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟನು. ಕಡೆಗೆ ಬೆಳಗಾಗುತ್ತಾ ಬಂದಿತು. ಯಾರೋ ಬಾಗಿಲು ತಟ್ಟಿದಂತಾಗಲು ಹೋಗಿ ನೋಡಿದನು. ಅಧಿಕಾರಿಗಳಿಬ್ಬರು ತನಗಾಗಿ ಕಾದಿರುವುದನ್ನು ನೋಡಿ ತನ್ನ ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಹೋಗಿ ತಾನು ಪ್ರಯಾಣಮಾಡಬೇಕಾಗಿರುವ ಹಡಗಿನಲ್ಲಿ ಇಡಲು ಸೇವಕರಿಗೆ ಅಪ್ಪಣೆಯನ್ನು ಕೊಟ್ಟು ತಾನು ಅಧಿಕಾರಿಗಳ ಸಂಗಡ ಹೊರಟುಹೋದನು.

---

# ಅಧ್ಯಾಯ 8

## ದೈವಪಾಲನೆ.

ಸನ್ತಾಪಕನು ಅರಮನೆಯನ್ನು ಬಿಟ್ಟು ಹೊರಟಾಗ ಪೃಥ್ವಿಯನ್ನು ಇನ್ನೂ ನಸುಗತ್ತಲೆ ಕವಿದೇ ಇದ್ದಿತು. ತಾನು ಹೋಗಿ ಸಾಮಾನುಗಳನ್ನು ಹಡಗಿನಲ್ಲಿಡಿಸಿ ಕೂತುಕೊಳ್ಳುವಷ್ಟರಲ್ಲಿ ಸೂರ್ಯನು ಪೂರ್ವಾದ್ರಿಯಲ್ಲಿ ತಲೆದೋರಿ, ಘಳಿಗೆ ಘಳಿಗೆಗೂ ಪ್ರವರ್ಧಮಾನನಾಗುತ್ತಾ ಬಂದನು. ಹಡಗು ಹೊರಡಲು ಕದಲಿತು. ನಮ್ಮ ಕಥಾನಾಯಕನ ಹೃದಯವು ಅವರಿಹೋಯಿತು. ಹಡಗು ಕರೆಯನ್ನು ಬಿಟ್ಟು ಅರ್ಧಮೈಲಿ ದೂರ ಬಂದಿತು. ಸೂರ್ಯನ ಕಿರಣಗಳಿಂದ ಪ್ರಕಾಶವಾಗಿ ಪಶ್ಚಿಮದಿಕ್ಕಿನಲ್ಲಿ ಕಾಣುತ್ತಿದ್ದ ತನ್ನ ಪಟ್ಟಣವನ್ನು ನೋಡಿ ಸಹಿಸಲಾರದೆ ಎರಡು ಹಸ್ತಗಳಿಂದಲೂ ಮುಖವನ್ನು ಮುಚ್ಚಿಕೊಂಡು ಸಣ್ಣ ಕೂಸು ರೋಧಿಸುವಂತೆ ರೋಧಿಸುತ್ತಾ—"ಅಕಟಕಟಾ ! ನನ್ನಂತಹ ದೌರ್ಭಾಗ್ಯರು ಲೋಕದಲ್ಲಿ ಯಾರಾದರೂ ಇರುವರೇ? ಪುನಃ ನನ್ನ ಪಟ್ಟಣವನ್ನು ನೋಡುವಷ್ಟು ಅದೃಷ್ಟ ನನಗಿದೆಯೇ ? ಹಾ ! ಸನ್ತಾಪಕಾ ! ನೀನು ಅರಸನ ಮಗನಾಗಿ ಹುಟ್ಟುವದಕ್ಕಿಂತಲೂ ಭಿಕ್ಷಗಾರನೊಬ್ಬನ ಮಗನಾಗಿ ಹುಟ್ಟಿದ್ದರೆ ಈ ಪರಿ ದುಃಖಪರಂಪರೆಗಳು ನಿನಗೊದಗುತ್ತಿದ್ದವೇ ! ಹಾ ! ಪಟ್ಟಣವೇ ! ನಿನ್ನನ್ನೆಂತು ಮರೆಯಲಿ ? ನನ್ನ ಒಡನಾಡಿಗಳೇ, ನಿಮ್ಮ ನೆನಪನ್ನು ನನ್ನ ಮನದೊಳಗಿಂದ ಹೇಗೆ ಅಳಿಸಲಿ ? ಪುನಹ ನನ್ನ ಪ್ರಿಯ ತಂದೆಯ ಸಮಾಧಿಯನ್ನು ನೋಡುವುದು ನಿಜವೇ ? ಪ್ರತಿದಿನವೂ ನನ್ನ ತಂದೆಯೇ, ನಿನ್ನ ಸಮಾಧಿ ಸ್ಥಳದಲ್ಲಿಯೇ ಇರುತ್ತಿದ್ದೆನಲ್ಲಾ ! ನನ್ನ ದುಃಖವನ್ನೆಲ್ಲಾ ನಿನ್ನ ಸಮಾಧಿಯಮೇಲೆ

ಸುರಿಸುತ್ತಿದ್ದೆನಲ್ಲಾ ! ನಾನು ಇನ್ನೆಲ್ಲಿಗೆ ಹೋಗಲಿ ? ಯಾವ ಸ್ಥಳದಲ್ಲಿ ನನ್ನ ಕಣ್ಣೀರನ್ನು ಸುರಿಸಿ ನನ್ನ ಹೃದಯದ ಭಾರವನ್ನು ನೀಗಿಕೊಳ್ಳಲಿ ?

ಪ್ರಿಯ ಜನಕಾ ! ನಿನ್ನ ಭೂತಕ್ಕೆ ಮಾಡಿದ ವಾಗ್ದಾನವನ್ನು ನೆರವೇರಿಸಲಾಗಲಿಲ್ಲವಲ್ಲಾ ? ದೈವವೇ ! ನನ್ನ ಪಾಲಿಗೆ ನೀನು ಬರಬಾರದೇತಕ್ಕೆ ? ಏಕೆ ವಿಮುಖನಾಗಿದ್ದೀ ? ನಾನು ಅಪರಾಧಿಯೋ ? ಹೌದು; ಬಾಲ್ಯಗುಣದೋಷದಿಂದ ಅಂತಹ ಅಪರಾಧವನ್ನು ಮಾಡಿದ್ದಾಗ್ಯೂ ಕ್ಷಮಿಸಬಾರದೇ ! ಕರುಣಿಸಬಾರದೇ ! ಭಗವಂತಾ ! ನೀನು ನನ್ನಮೇಲೆ ಮುನಿಸಲು ಕಾನೆಷ್ಟುರವನು ? ಎಂದು ನಾನಾಪರಿಯಿಂದ ದುಃಖಿಸುತ್ತಾ ಹಾಗೆಯೇ ಸ್ಮರಣೆತಪ್ಪಿ ಹಡಗಿನಲ್ಲಿದ್ದ ಒಂದು ಹಲಗೆಯಮೇಲೆ ಒರಗಿಬಿಟ್ಟನು. ಜೊತೆಯಲ್ಲಿ ಬಂದಿದ್ದ ಅಧಿಕಾರಿಗಳೋ ರಾಜಕುಮಾರನು ಕಳೆದರಾತ್ರೆ ನಿದ್ರೆಯಿಲ್ಲದ್ದರಿಂದ ಮಲಗಿ ನಿದ್ರಿಸುತ್ತಿದಾನೆಂದು ತಿಳಿದು ಎಬ್ಬಿಸಲು ಭಯದಿಂದ ಹಿಂದೆಗೆಯುತ್ತಿದ್ದರು. ಗಾಳಿಯು ಅನುಕೂಲವಾಗಿದ್ದುದರಿಂದ ಹಡಗು ಚಂದ್ರಗಿರಿ ನಗರವನ್ನು ಬಿಟ್ಟು ಅನೇಕ ಮೈಲಿಗಳ ದೂರ ಬಂದಿದ್ದಿತು. ಸೂರ್ಯಾಸ್ತಮಯವಾಗಿ ಕತ್ತಲೇ ಆಯಿತು. ಇಷ್ಟು ಹೊತ್ತಾದರೂ ಅಧಿಕಾರಿಗಳು ಯುವರಾಜನನ್ನು ಎಚ್ಚರಗೊಳಿಸಲೇ ಇಲ್ಲ. ಕಡೆಗೂ ಸ್ಮೃತಿತಪ್ಪಿದ್ದ ಯುವರಾಜನು ತಾನೇ ಎಚ್ಚರಗೊಂಡು ರಾತ್ರೆಯ ಊಟವನ್ನು ಮಾಡಿ ಮಲಗಲು ತನಗಾಗಿ ಏರ್ಪಡಿಸಿದ್ದ ಸ್ಥಳಕ್ಕೆ ಹೋಗಿ ಮಲಗಿದನು. ಅಧಿಕಾರಿಗಳು ಸಹ ತಮ್ಮ ಭೋಜನಾನಂತರ ತಾವೂ ಮಲಗಿಬಿಟ್ಟರು. ಸನ್ತಾಪಕನಿಗಾದರೋ ಚಿಂತೆಯಿಂದ ನಿದ್ರೆಯೇ ಬರಲಿಲ್ಲ. ಚಿಂತೆಯಿರುವ ಯಾರಿಗೇ ಆಗಲಿ ನಿದ್ರೆ ಹತ್ತೀತೇ ? ಹಡಗು ನಡಿಸುವವರು ಹೊರ್ತು ಉಳಿದವರೆಲ್ಲರೂ ಮಲಗಿಬಿಟ್ಟರು.

ಅಧಿಕಾರಿಗಳಾದರೋ ಗಾಢನಿದ್ರೆಯಲ್ಲಿದ್ದರು. ಅವರ ತಲೆದಿಂಬಿನ ಸಮೀಪದಲ್ಲಿ ಏನೋ ಬೆಳ್ಳಗೆ ಕಾಣಿಸುತ್ತಿದ್ದಿತು. ಅದು ಏನಾಗಿರ ಬಹುದೆಂದು ಸಮೀಪಕ್ಕೆ ಹೋಗಿ ನೋಡುವಲ್ಲಿ ತನ್ನ ಚಿಕ್ಕಪ್ಪನಾದ ಭುಜಂಗಮನು ಸಾಮಂತರಾಜನಾದ ರವಿನಗರಾಧಿಪನಿಗೆ ಬರೆದ ಪತ್ರವಾಗಿದ್ದಿತು. ತನ್ನನ್ನು ರವಿನಗರಕ್ಕೆ ಕಳುಹಿಸುವ ವಿಷಯ ದಲ್ಲಿ ಮೊದಲೇ ಸಂಶಯವುಳ್ಳವನಾಗಿದ್ದುದರಿಂದ ಇದರಲ್ಲಿ ಏನು ಬರದಿದೆಯೋ ನೋಡೋಣವೆಂದು ಆ ಪತ್ರವನ್ನು ತಾನು ಮಲಗಿದ್ದ ಸ್ಥಳಕ್ಕೆ ಮೆಲ್ಲಗೆ ತೆಗೆದುಕೊಂಡು ಹೋಗಿ ಬಹು ಉಪಾಯದಿಂದ ಬಿಚ್ಚಿ ಓದಿದನು. ಓದಿದಕೂಡಲೇ ಘಾಬರಿಯೂ ಆಶ್ಚರ್ಯವೂ ಆಗಿ ನಿದ್ರಾಭರದಿಂದಲೋ, ದುಃಖದಿಂದ ಕಣ್ಣುಗಳೆರಡರಲ್ಲಿಯೂ ನೀರು ತುಂಬಿ ಮಂಜಾಗಿರುವುದರಿಂದಲೋ ತಪ್ಪಾಗಿಯೇ ಓದಿರ ಬಹುದು. ಒಳ್ಳೇದು, ಮತ್ತೊಂದಾವರ್ತಿ ಕಣ್ಣುಗಳೆರಡನ್ನೂ ಹೊಸಗಿಕೊಂಡು ಓದುತ್ತೇನೆ.

ಸ್ವಸ್ತಿ, ಶ್ರೀಮತ್ ರವಿನಗರಾಧೀಶನಿಗೆ—

ಚಂದ್ರಗಿರಿ ನಗರಾಧೀಶನೂ ಮಹಾರಾಜಾಧಿರಾಜನೂ ಆದ ಭುಜಂಗಮರಾಯನು ಇದರ ಮೂಲಕ ಆಜ್ಞಾಪಿಸುವುದೇನೆಂದರೆ—ಈ ಪತ್ರವು ನಿನ್ನ ಹಸ್ತಗತವಾದ ತಕ್ಷಣವೇ ಯಾವ ಸಂಕೋಚವೂ ಇಲ್ಲದೆ ಈ ಸಸ್ತ್ರಾಪಕನ ಶಿರಚ್ಛೇದನವನ್ನು ಮಾಡುವುದು. ನೀನು ಕಪ್ಪವನ್ನು ತೆಗೆದುಕೊಂಡು ಚಂದ್ರ ಗಿರಿಗೆ ಬಂದಾಗ ಸಮಕ್ಷಮ ಸಂಗತಿಗಳೆಲ್ಲವನ್ನೂ ಪಾಂಗ್ತವಾಗಿ ತಿಳಿಯಲಾದೀತು. ಅಲಕ್ಷ್ಯಭಾವವನ್ನೇನಾದರೂ ತೋರಿಸಿ ಇವನ ಪ್ರಾಣಸಂರಕ್ಷಣೆಮಾಡಿದ್ದೇ ಆದರೆ ಅದೇ ಶಿಕ್ಷೆಯು ನಿನಗೆ ತಪ್ಪುವುದಿಲ್ಲವೆಂದು ಖಂಡಿತವಾಗಿ ತಿಳಿಯುವುದು.

ಭುಜಂಗಮ ಮಹಾರಾಜ.

ಇದನ್ನು ಓದಿದಕೂಡಲೇ ಭುಜಂಗಮನಮೇಲಣ ಸಿಟ್ಟಿನಿಂದ ಶರೀರವೆಲ್ಲಾ ಕಂಪಿಸಿ ತನ್ನ ಮನದಲ್ಲಿ ಬಗೆಬಗೆಯ ಯೋಚನೆ ಗಳನ್ನು ಮಾಡುತ್ತಾ ಕಡೆಗೆ ಎಲವೆಲವೋ ನೀಚನಾದ ಭುಜಂಗಮಾ, ನೀನು ನನ್ನ ತಂದೆಯನ್ನು ಕೊಂದು ನನ್ನ ತಾಯಿಯ ಪಾತಿವ್ರತ್ಯ ವನ್ನು ಭಂಗಪಡಿಸಿ ರಾಜ್ಯವನ್ನು ಅಪಹರಿಸಿದ್ದು ಮಾತ್ರವಲ್ಲದೆ ಉಪಾಯಾಂತರದಿಂದ ನನ್ನನ್ನೂ ಕೊಲ್ಲಲುದ್ದೇಶಿಸಿದೆಯಾ? ಛೀ, ಭ್ರಷ್ಟಾ! ನಿನ್ನ ಜನ್ಮವನ್ನು ಸುಡು. ಭಗವಂತನ ಕೃಪಾಕಟಾಕ್ಷ ನನ್ನಮೇಲೆ ಇರುವತನಕ ನನಗೆ ಭಯವೇ? ಒಳ್ಳೇದು, ನಿನ್ನ ಬೆರ ಳನ್ನು ನಿನ್ನ ಕಣ್ಣಿನಲ್ಲಿಯೇ ಚುಚ್ಚುತ್ತೇನೆ, ಎಂದು ಪತ್ರದಲ್ಲಿದ್ದ "ಸನ್ತಾಪಕನ ಶಿರಚ್ಛೇದನವನ್ನು ಮಾಡುವುದು" ಎಂಬುದನ್ನು ಬಹು ಯುಕ್ತಿಯಿಂದ ಅಳಿಸಿ ಅದಕ್ಕೆ ಬದಲಾಗಿ "ಅಧಿಕಾರಿಗಳ" ಎಂದು ತಿದ್ದಿ, ತನ್ನಲ್ಲಿದ್ದ ತನ್ನ ತಂದೆಯ ಮುದ್ರೆಯಿಂದ ಮುದ್ರಿಸಿ ಮೊದಲಿದ್ದ ಸ್ಥಳದಲ್ಲಿಯೇ ಪತ್ರವನ್ನಿರಿಸಿ ತನ್ನ ಸ್ಥಳಕ್ಕೆ ಬಂದು ಯೋಚಿಸುತ್ತಾ ಕುಳಿತನು. ಸ್ವಲ್ಪ ಹೊತ್ತಿನೊಳಗಾಗಿಯೇ ಸಮುದ್ರ ಕಳ್ಳರ ಗುಂಪು ತಾವಿದ್ದ ಹಡಗನ್ನು ಮುತ್ತಿಕೊಂಡಿತು. ತಕ್ಷಣವೇ ಸನ್ತಾಪಕನು ಕಳ್ಳರ ಹಡಗಿನೊಳಕ್ಕೆ ಹೊಕ್ಕು ಅವರ ಸಂಗಡ ಮಹಾಪರಾಕ್ರಮದಿಂದ ಕಾದ್ದಾಡುತ್ತಿದ್ದನು. ಇಷ್ಟರಲ್ಲಿ ಹಡಗಿ ನಲ್ಲಿ ನಿದ್ರೆಮಾಡುತ್ತಿದ್ದ ಅಧಿಕಾರಿಗಳೂ ಸೇವಕರೂ ಕಡಲು ಗಳ್ಳರಿಗೆ ಭಯಪಟ್ಟು ತಮ್ಮ ಹಡಗನ್ನು ಮುಂದೆ ಬಿಟ್ಟು ತಪ್ಪಿಸಿ ಕೊಂಡು ಹೋಗಿಬಿಟ್ಟರು.

ಇತ್ತ ತನ್ನೊಂದಿಗೆ ಬಲು ಧೈರ್ಯದಿಂದ ಕಾದಾಡುತ್ತಿದ್ದ ಶೂರನ ಪರಾಕ್ರಮಕ್ಕೆ ಕಳ್ಳರು ಬೆರಗಾಗಿ, ಒಬ್ಬರ ಮುಖವನ್ನೊ ಬ್ಬರು ನೋಡಿಕೊಳ್ಳುತ್ತಾ, ಒಬ್ಬನು ಮತ್ತೊಬ್ಬನನ್ನು ಕುರಿತು— ಎಲಾ! ಇವ ಯಾರಿರಬೇಕ್ಲಾ?

2 ನೆಯವನು—ಯಾರಿರಬೇಕೋ ನನಗೇ ಟಾಪ್ಕಿಲ್ಲಪ್ಪಾ, ಇವ ಯಾರಿಗೂ ಮಣಿಯೋದಿಲ್ಲವಲ್ಲಾ, ಏನು ಮಾಡಾಸ್ಲಾ ?

3 ನೆಯವನು—ಎಲಾ, ಇವನ ಸಗ್ತಿ ಎಷ್ಟಿರಬೇಕ್ಲಾ ? ಈಸ್ಮಂದಿಗೆ ಎರಡು ತಾಸಿನಿಂದ ಇವ ಒಬ್ಬನೇ ಜವಾಬ್ ಕೊಡ್ತಿದ್ದಾನೆ ?

4 ನೆಯವನು—ಎಲಲಲಾ ಅಲ್ನೋಡೋ ಕತ್ತಿ ಯಂಗ್ತಿರುವ್ನಾನೆ ?

5 ನೆಯವನು—ಈಸ್ದಿನಾ ಆಯ್ತು ಈಸ್ ಅಡಗೇಲ್ನಾ ಲೂಟಿ ಮಾಡಿದ್ದೀಪಿ. ಇಂಥಾ ಪೈಲ್ವಾನ್ ಜಟ್ಟೀನಾ ನಾಕಾಣಪ್ಪ! ಭೀಮ್ನಂತಾ ಈ ಜಟ್ಟೀನಾ ಯಾವ್ತಾಯಿ ಅಡವಳೋ ?

6 ನೆಯವನು—ಎಲಾ, ಇವನ್ನೆಲ್ಲೋ ನೋಡ್ದಂಗೈತ್ಲಾ

7 ನೆಯವನು— ನಂಗೂ ಅಂಗೇ ಕಾಣ್ತದಪ್ಪ. ಇವನ್ನ ಸಂದ್ರಗಿರಿಯಾಗೇ ನೋಡಿರಬೇಕು.

8 ನೆಯವನು—ಹಿಂದೆ ಸರಿರೋ, ನಾನೋಡ್ತೀನಿ....ಎಲಲಾ ಇವ ದೊರೆಮಗಾನೋ ಯಪ್ಪೋಯ್ ಇವನ್ನಾವು ಗದ್ದೀವೇನೋ?

9 ನೆಯವನು—ಇವ ಕೂತಡಗಾ ತಪ್ಪಿಸ್ಕೊಂಡೇ ಓಯ್ತು.

10 ನೆಯವನು—ಎಲೋ ಇಲ್ಕೇಳ್ರೋ, ಇವಯೇನೋ ರಾಜನ್ಮಗಾ. ನಮ್ಕೂನಾ ಚನ್ನಾಗಿಡದಾನೆ. ನಾವಂತೂ ಇವನ್ನ ಮಣಿಸೋಕಾಗೋದಿಲ್ಲಾ. ಒಗಿ ಕೈಕಾಲ್ಮೇಲೆ ಬೀಳೋವಾ ಬರ್ರ್ರೋ. ಇಲ್ದಿದ್ದರೆ ಊರಿಗೆ ಹೋಗಿ ಪೌಜು ತಕ್ಕೊಂಡುಬಂದು ನಮ್ಮ ತಲೆಗಳ್ನಾ ಕತ್ತರಿಸ್ಯಾಕ್ಯಾನು. ನಮ್ಮ ಹೆಡ್ತಿಮಕ್ಕಳು ಪರದೇಸಿಗಳಾದಾರು.

11 ನೆಯವನು— ಅವುದ್ರೋ ಅಣ್ಣೋಳ್ಳಂಗೆ ಕೇಳಾನೋ, ಇಲ್ಲಿದ್ರೆ ನಮ್ಮ ತಲೆಗಳೆಲ್ಲಾ ಓಳಾದಾವು.

12 ನೆಯವನು—ಬನ್ರೋ ಎಂದು ಎಲ್ಲರೂ ಹೋಗಿ ಸನ್ಯಾಸಕನ ಪಾದಗಳಮೇಲೆ ಬಿದ್ದು ನೋಡಿ, ಸ್ವಾಮ್ಯೋರೆ ತಪ್ಪಾಯ್ತು. ನಿಮ್ಮ ಕೆಲಸಾ ನಮ್ಗೆ ತಿಳಿಲಿಲ್ಲ. ಇನ್ನೆಂದಿಗೂ ಇಂತಾ ಕೆಲ್ಸಾ ಮಾಡೋದಿಲ್ಲ. ನಾವುಗಳ್ಯಾರೂ ನಮ್ಮ ಸೋಗ ಇರಬೇಕು. ತಾವು ಕೊತ್ತ ಅವಗು ನಿಮ್ಮನ್ನ ಬಿಟ್ಟು ತಪ್ಪಿಸಿಕೊಂಡೋಯ್ತು. ಬೇಕಾದ್ರೆ ನಾವುಗಳ್ನ ಕದ್ದಂಥಾಗಿ ಊರು ಮುಟ್ಟಿಸ್ತೇವೆ, ಅಪ್ಪಣೆಯಾಗಬೇಕು, ಎಂದು ಬೇಡಿಕೊಂಡರು.

ಸನ್ಯಾಸಕ — ನೀವು ಭಯಪಡಬೇಡಿರಿ. ನಿಮ್ಮನ್ನು ಕ್ಷಮಿಸಿದ್ದೇನೆ. ಈಗ ನನ್ನನ್ನು ನಿಮ್ಮ ಹಡಗಿನಲ್ಲಿ ಕರೆದುಕೊಂಡು ಹೋಗಿ ಚಂದ್ರಗಿರಿ ಪಟ್ಟಣಕ್ಕೆ ಸಮೀಪವಾಗಿರುವ ರೇವಿಗೆ ಬಿಡಿರಿ. ಅಲ್ಲಿಂದ ನಾನು ಹೋಗುತ್ತೇನೆ ಎಂದು ಹೇಳಿದನು. ಅದರಂತೆ ಕಳ್ಳರು ಒಪ್ಪಿಕೊಂಡು ಬಹು ಭಯ ಮರ್ಯಾದೆಗಳಿಂದ ಕರೆದುಕೊಂಡು ಹೋಗಿ ಸನ್ಯಾಸಕನು ಹೇಳಿದ ಸ್ಥಳಕ್ಕೆ ಬಿಟ್ಟರು. ಅಲ್ಲಿಂದ ಸನ್ಯಾಸಕನು ಭುಜಂಗನಿಗೆ ತಾನು ಹಿಂತಿರುಗಿ ಚಂದ್ರಗಿರಿಯ ಸಮೀಪಕ್ಕೆ ಬಂದಿರುವುದಾಗಿಯೂ ನಾಳೆ ಮುಖತಃ ಎಲ್ಲಾ ಸಂಗತಿಗಳನ್ನೂ ತಿಳಿಸುವುದಾಗಿಯೂ ಪತ್ರ ಬರೆದುಕಳುಹಿಸಿ ತನ್ನ ಮಿತ್ರನಾದ ಸೌಮಿತ್ರಕನಿಗೂ ಬೇಗ ತನ್ನ ಬಳಿಗೆ ಬರಲು ವರ್ತಮಾನ ಕಳುಹಿಸಿದನು.

# ಅಧ್ಯಾಯ ೯

## ಪುಷ್ಪಮಾಲಿನಿಯು ಮರಣ.

ನಾಟಕ ಪ್ರದರ್ಶನದ ರಾತ್ರಿ ಪುಷ್ಪಮಾಲಿನಿಯು ತನ್ನ ತಾಯಿ ತಂದೆಗಳೊಡನೆ ನಾಟಕಕ್ಕೆ ಬಂದಿದ್ದಳು. ನಾಟಕದ ಮಧ್ಯದಲ್ಲಿ ಭುಜಂಗನೂ ಕಪಟಾವತಿಯೂ ಹೊರಟುಹೋದಕೂಡಲೇ ನಾಟಕವೂ ಸಮಾಪ್ತವಾಯಿತು. ಬಂದವರೆಲ್ಲರೂ ತಮ್ಮ ಮನೆಗಳಿಗೆ ಹೊರಟುಹೋದರು. ಮಂತ್ರಿಯಾದ ಕುತಂತ್ರಿಕರಾಯನನ್ನು ಅರಸನಾದ ಭುಜಂಗನು ಕರೆಸಿದನಾದಕಾರಣ ಈತನು ತನ್ನ ಪತ್ನಿಯನ್ನೂ ಪುತ್ರಿಯಾದ ಪುಷ್ಪಮಾಲಿನಿಯನ್ನೂ ಮನೆಗೆ ಕಳುಹಿಸಿ ತಾನು ರಾಜನನ್ನು ನೋಡಲು ಹೋದನು. ಮಧ್ಯರಾತ್ರಿಗೆ ಮೀರಿಹೋಗಿದ್ದಿತಾದುದರಿಂದ ತಾಯಿಯೂ ಮಗಳೂ ಮನೆಗೆ ಬಂದು ಸಮರಿಸಿಕೊಳ್ಳುವುದರಲ್ಲಿ ನಿದ್ರೆಯೇ ಹೋಯಿತು. ಬೆಳಕು ಹರಿಯುವ ಹೊತ್ತಾಯಿತು. ಪುಷ್ಪಮಾಲಿನಿಗೆ ಆಗ ಸ್ವಲ್ಪ ಕಣ್ಣು ಮುಚ್ಚಿಕೊಂಡು ಬರುತ್ತಿದ್ದುದರಿಂದ ಹಾಸಿಗೆಯ ಮೇಲೆ ಮಲಗಿದಳು. ಸೂರ್ಯೋದಯವಾದಾಗ್ಯೂ ಎಚ್ಚರವೇ ಇಲ್ಲ. ನಾಟಕದಲ್ಲಿ ನೋಡಿದ ದೃಶ್ಯಗಳೆಲ್ಲಾ ಕಣ್ಣೆದುರಿನಲ್ಲಿಯೇ ಇದ್ದಂತಿದ್ದಿತು. ಗಾಯನವು ಕಿವಿಗಳಲ್ಲಿ ಝೇಂಕರಿಸುತ್ತಿದ್ದುದರಿಂದ ಸೊಂಪಾಗಿ ನಿದ್ರೆ ಹತ್ತಿತು. ಎಂಟು ಒಂಭತ್ತು ಘಂಟೆಯಾಯಿತು. ಆಗ ಎಚ್ಚರಗೊಂಡು ಅವಸರವಸರವಾಗಿ ಪ್ರಾತಃಕರ್ಮಗಳನ್ನು ತೀರಿಸಿ ತನ್ನ ಕೊಠಡಿಯಲ್ಲಿ ಕುಳಿತು ತನ್ನ ಮನೋವಲ್ಲಭನಾದ ಸನ್ತಾಪಕನ ಹಾವಭಾವಗಳನ್ನೂ, ರೂಪಲಾವಣ್ಯಗಳನ್ನೂ, ಮೃದುಮಧುರ ಭಾಷಣಗಳನ್ನೂ ಯೋಚಿಸುತ್ತಾ ತತ್ಕಾಲದಲ್ಲಿ ತನ್ನ ಪ್ರಿಯನಿಗೆ

ಪ್ರಾಪ್ತವಾಗಿರುವ ಬುದ್ಧಿವಿಕಲ್ಪಕ್ಕಾಗಿ ದುಃಖಿಸಿ ತನ್ನ ಮನದಲ್ಲಿ— ನಮ್ಮ ತಂದೆಯು ಆ ದಿವಸ ಮಹಾರಾಜನ ಬಳಿಗೆ ಹೋಗಿ ಯುವರಾಜನಿಗೆ ನನ್ನ ಮೇಲಿರುವ ಪ್ರೇಮಾತಿಶಯವನ್ನೂ, ಆತನ ಬುದ್ಧಿವಿಕಲ್ಪಕ್ಕೆ ನನ್ನ ತಿರಸ್ಕಾರಭಾವವೇ ಕಾರಣವೆಂಬುವುದನ್ನೂ ತಿಳಿಸಿರಬಹುದು. ನಮ್ಮಿಬ್ಬರ ವಿವಾಹದ ವಿಷಯವಾದ ಮಾತು ಕಥೆಗಳಾಗಲು ಪ್ರಾರಂಭವಾದಂದಿನಿಂದ ನನ್ನ ಪ್ರಿಯನಿಗೆ ಸ್ವಲ್ಪ ಸ್ವಲ್ಪವಾಗಿ ಗುಣಮುಖವಾಗುತ್ತಿರುವಂತೆ ಕಾಣುತ್ತಿದೆ. ಇಲ್ಲ ದಿದ್ದರೆ ನಾಟಕಕ್ಕೆ ರಾತ್ರಿ ಬಂದು ಅಷ್ಟು ಸ್ವಸ್ಥಚಿತ್ತನಾಗಿ ಕೂತು ಕೊಳ್ಳುತ್ತಿದ್ದನೇ? ಎಂದಿಗೂ ಇಲ್ಲ. ಇನ್ನು ಕೆಲವು ದಿನಗಳೊಳ ಗಾಗಿ ಪೂರ್ಣಸ್ವಸ್ಥನಾಗಲು ಸಂಶಯವೇ ಇಲ್ಲ. ನಾನು ನಮ್ಮ ತಂದೆಯ ಮಾತನ್ನು ನಿರಾಕರಿಸಿ ಆತನ ವಿಷಯದಲ್ಲಿ ಅಲಕ್ಷ್ಯ ಭಾವದಿಂದ ವರ್ತಿಸಿದುದಕ್ಕಾಗಿಯೇ ನನ್ನ ಪ್ರಿಯನು ಇಂತಹ ಅವಸ್ಥೆಗೂ ಪರಿತಾಪಸ್ಥಿತಿಗೂ ಗುರಿಯಾದನು. ನಾನೂ ಹಗಲಿರುಳೂ ಚಿಂತಿಸಿ ಕ್ಷೀಣಳಾದೆನು. ನನ್ನ ಈ ಚಿಂತೆಯನ್ನು ಯಾರಮುಂದೆ ಹೇಳಿಕೊಳ್ಳಲಿ? ಅವರವರ ಚಿಂತೆಯು ಅವರವರಿಗೇ ಗೊತ್ತು. ನನ್ನ ತಂದೆಯು ಏಕೆ ಇಂತಹ ಆಜ್ಞೆಯನ್ನು ಕೊಟ್ಟನೋ ತಿಳಿಯದು. ಇಲ್ಲದಿದ್ದರೆ ನಮ್ಮಿಬ್ಬರ ವಿವಾಹವಾಗಿ ಅನೇಕ ದಿನಗಳಾಗುತ್ತಿದ್ದವು. ಒಳ್ಳೇದು, ಹೇಗೂ ಈ ಸಾಯಂಕಾಲ ಅರಮನೆಯ ಕಡೆಗೆಹೋಗಿ ಬರುತ್ತೇನೆ ಎಂದು ಧೈರ್ಯ ತಂದುಕೊಂಡು ಬೀದಿಯ ಕಡೆಗೆ ಇದ್ದ ಕಿಟಕಿಯ ಕಡೆ ನೋಡುತ್ತಿರಲು ಜನರು ಅಲ್ಲಲ್ಲಿ ಗುಂಪುಗುಂಪಾಗಿ ಸೇರಿ ಯಾವುದೋ ಒಂದು ವಿಷಯವನ್ನು ಕುರಿತು ಪಿಸುಗುಟ್ಟಿ ಕೊಂಡು ಮಾತನಾಡುತ್ತಿದ್ದರು. ಮಂತ್ರಿ ಮಂತ್ರಿ ಎಂಬ ಶಬ್ದವು ಮಾತ್ರ ಈಕೆಗೆ ಕೇಳಿಸುತ್ತಿದ್ದಿತು. ಈಕೆಯ ಹೃದಯವು ಡವಡವನೆ ಬಡಿದುಕೊಳ್ಳಲಾರಂಭವಾಯಿತು. ಏನೋ ಒಂದು ವಿಧವಾದ

ಸಂಕಟ. ಇಷ್ಟರಲ್ಲಿ ದಾದಿಯೊಬ್ಬಳು ಬಂದು ಬಾಗಿಲು ತಟ್ಟಲು, ಪ್ರಯಾಸದಿಂದ ಹೋಗಿ ತೆರೆದು ರಂಜಿನೀ, ಏನು ಸಮಾಚಾರ ?

ರಂಜಿನಿ—ತಾಯೀ, ಸಮಾಚಾರವೇ? ಮರಣದ ಸಮಾಚಾರ.

ಪುಷ್ಪಮಾಲಿನಿ—(ಗಾಬರಿಯಿಂದ) ಮರಣದ ಸಮಾಚಾರ ಯಾರದು ?

ರಂಜಿನಿ—ನಿಂ....ಮ್....ಮ್ಮ ತ....ತಂ....ದೆಯವರದು.

ಪುಷ್ಪಮಾಲಿನಿ—ಏನು, ನಮ್ಮ ತಂದೆಯವರದೇ ? ಸವಿಸ್ತಾರವಾಗಿ ಹೇಳು.

ರಂಜಿನಿ—ತಾಯೀ, ರಾತ್ರಿ ನಾವು ನಾಟಕದಿಂದ ಬಂದ ಮೇಲೆ ಮಹಾರಾಜರು ನಿಮ್ಮ ತಂದೆಯವರನ್ನು ಕಾರ್ಯಾರ್ಥವಾಗಿ ಕರೆಸಿದಾಗ ಯುವರಾಜನು ಬಾಕಿನಿಂದಲೋ ಖಡ್ಗದಿಂದಲೋ ಇರಿದು ಕೊಂದುಹಾಕಿದನಂತೆ. ಈ ಸಮಾಚಾರ ನಮಗೆ ತಿಳಿದು ಸ್ವಲ್ಪಹೊತ್ತು ಮಾತ್ರವಾಯಿತು. ಶವವನ್ನು ತರುವುದಕ್ಕಾಗಿ ತಮ್ಮ ಅಣ್ಣಂದಿರೂ ಇನ್ನೂ ಕೆಲವರೂ ಹೋಗಿದ್ದಾರೆ ಎಂದು ಹೇಳಿ ಹೊರಟುಹೋದಳು. ಪುಷ್ಪಮಾಲಿನಿಗೆ ದಾದಿಯ ಮಾತುಗಳು ಎಲ್ಲೋ ಸ್ವಪ್ನದಲ್ಲಿ ಕೇಳಿಸಿಕೊಂಡ ಹಾಗಿತ್ತು. ದಾದಿಯು ಹೋದ ಕೆಲವು ನಿಮಿಷಗಳ ಮೇಲೆ ಆಕೆಯು ಹೇಳಿದ ಮಾತುಗಳನ್ನು ಪುನರಾಲೋಚಿಸಿ—ಏನು! ನನ್ನ ತಂದೆಯು ಮೃತನಾದನೇ? ನಾನು ಯಾರನ್ನು ಪತಿಯಾಗಿ ಪಡೆಯಬೇಕೆಂದಿದ್ದೆನೋ, ಯಾರ ವಿಷಯವನ್ನು ದಿವಾರಾತ್ರಿಗಳಲ್ಲಿಯೂ ಚಿಂತಿಸಿ ಕ್ಷೀಣವಾದೆನೋ, ಯಾರ ರೂಪುಲಾವಣ್ಯಗಳನ್ನು ನನ್ನ ಮನಸ್ಸಿನಲ್ಲಿ ಪ್ರತಿಕ್ಷಣಗಳಲ್ಲಿಯೂ ಚಿತ್ರಿಸಿಕೊಳ್ಳುತ್ತಿದ್ದೆನೋ, ಯಾರ ಮೃದುಮಧುರ ಭಾಷಣಗಳು ನನ್ನ ಕಿವಿಗಳಿಗೆ ವೀಣಾಗಾನವೆಂದು ಆನಂದಪಡುತ್ತಿದ್ದೆನೋ,

ಇಲ್ಲದ್ದರಿಂದ ಚೇತರಿಸಿಕೊಳ್ಳಲು ಬಹಳ ಹೊತ್ತಾಯಿತೆಂದೇ ಹೇಳ ಬೇಕು. ಈಕೆಯು ಚೇತರಿಸಿಕೊಂಡು ಕಿಟಿಕಿಯ ಬಳಿಗೆ ಬಂದು ಬೀದಿಯ ಕಡ ನೋಡುವಲ್ಲಿ ಪ್ರಿಯ ತಂದೆಯ ಶವವನ್ನು ಮೃದು ಹೃದಯನಾದ ಅಣ್ಣನೂ ಪುರಜನರೂ ಮನೆಗೆ ತರುತ್ತಿದ್ದರು. ಶವವು ಮನೆಗೆ ಬಂದಿತು. ಈಕೆಯು ಹೋಗಿ ತಂದೆಯ ಶವದ ಮೇಲೆ ಬಿದ್ದು ಅಪ್ಪಿಕೊಂಡು ರೋಧಿಸುವಾಗ ಶವದ ಸುತ್ತಲೂ ನೆರೆದಿದ್ದವರ ಹೃದಯಗಳು ಒಡೆದುಹೋಗಿ ನೀರಾಗದಿದ್ದೀತೇ? ಮೃತನಾದ ತಂದೆಯ ಮೇಲಣ ಪ್ರೇಮಾತಿಶಯದಿಂದಲೂ, ತನ್ನ ಪ್ರಾಣನಾಯಕನೆಂದು ನಂಬಿಕೊಂಡಿದ್ದವನ ಕ್ರೂರಕೃತ್ಯದಿಂದಲೂ ಅದೇ ಘಳಿಗೆಯಲ್ಲಿ ಆಕೆಯ ಬುದ್ಧಿಯು ವಿಕಲ್ಪವಾಗಿಹೋಯಿತು. ಇನ್ನು ಮಾಡುವುದೇನು ? ಯಾವುದರ ಮೇಲೆಯೂ ಅರಿವಿಲ್ಲದಂತಾ ಯಿತು. ಆಹಾ! ಪಿತೃವಾತ್ಸಲ್ಯದ ಮಹಿಮೆಯು ಎಂತಹದ್ದಿರ ಬಹುದು !

ಆಕೆಯು ನೆನಸಿದ ಸುಖಸಂಪತ್ತುಗಳೆಲ್ಲಾ ಮಾಯವಾದವು. ಯಾವ ಪ್ರಯತ್ನದಿಂದಲಾದರೂ ಆಕೆಯನ್ನು ಸ್ವಸ್ಥಚಿತ್ತಳನ್ನಾಗಿ ಮಾಡಲು ಸಾಧ್ಯವಾಗದಾಯಿತು. ದಿನ ದಿನಕ್ಕೆ ಈ ತರುಣಿಯ ಹುಚ್ಚು ವೃದ್ಧಿಯಾಗುತ್ತಾ ಬಂದಿತು. ಇದ್ದಕ್ಕಿದ್ದ ಹಾಗೆಯೇ ತನ್ನ ಕೊಠಡಿಯನ್ನು ಬಿಟ್ಟು ತಮ್ಮ ಮನೆಯ ಹೂದೋಟಕ್ಕೆ ಹೋಗಿ ಹೂಗಳನ್ನು ಕಿತ್ತು ಮಾಲಿಕಗಳನ್ನಾಗಿ ಮಾಡಿ ತನ್ನ ಬಂಧುಗಳಿಗೂ ಸಖೀಜನರಿಗೂ ಹಂಚುತ್ತಿರುವಳು. ಹೀಗೆ ಯಾಕೆ ಮಾಡುತ್ತೀ ಎಂದು ಪ್ರಶ್ನೆಮಾಡಿದರೆ “ ನನ್ನ ತಂದೆಯ ಶವಕ್ಕೆ ” ಎಂದು ಹೇಳುವಳು. ಮತ್ತೊಮ್ಮೆ ತನ್ನ ಮನೋವಲ್ಲಭನಾದ ಸನ್ತಾಪಕ ನನ್ನು ನೆನೆದು ಪ್ರೇಮಭರಿತವಾದ ಹಾಡುಗಳನ್ನೂ, ಮರಣವನ್ನು ನೆನೆದು ಶೋಕಭರಿತವಾದ ಹಾಡುಗಳನ್ನೂ ಹಾಡುತ್ತಾ, ತೋಟದಲ್ಲಿ

ಗಿಡದಿಂದ ಗಿಡಕ್ಕೆ ತಿರುಗಾಡುತ್ತಾ ಕಡೆಗೆ ಒಂದುಸ್ಥಳದಲ್ಲಿ ಕೂಡ್ರು ಬೀಳುವಳು. ಕೆಲವು ಸಮಯಗಳಲ್ಲಿ ಆಕೆಯ ಹಾಡುಗಳಲ್ಲೇ ಆಗಲಿ ಮಾತುಗಳಲ್ಲೇ ಆಗಲಿ ಅರ್ಥವೇ ಇರುತ್ತಿರಲಿಲ್ಲ. ಆಕೆಯ ಆಭರಣ ಗಳೆಲ್ಲಿ ? ಅಲಂಕಾರವಾದ ಉಡಿಗೆಗಳೆಲ್ಲಿ ? ಮನೋರಂಜಿತವಾದ ರೂಪವೆಲ್ಲಿ ? ಅರ್ಥಗರ್ಭಿತವೂ ಮೃದುಮಧುರವೂ ಆದ ಭಾಷಣ ಗಳೆಲ್ಲಿ ? ಎಲ್ಲಾ ದುಃಖಪಡುವ ಹಾಳಾದವು. ನಸ್ತ್ರಾವಕನನ್ನು ನೋಡಿ ಈಕೆಯು ಎಷ್ಟು ಮರುಗುತ್ತಿದ್ದಳು ? ಈಗ ಈಕೆಯು ಇರುವ ಸ್ಥಿತಿಯನ್ನು ನಸ್ತ್ರಾವಕನು ನೋಡಿದ್ದರೆ ಎಷ್ಟು ಮರುಗುತ್ತಿದ್ದನೋ? ಎಷ್ಟು ನಿಟ್ಟುಸಿರುಬಿಡುತ್ತಿದ್ದನೋ ? ತಿಳಿಯದು. ತನ್ನ ಶರೀರದ ಮೇಲಾಗಲೀ ತಾನು ಮಾಡುವ ಕೆಲಸಗಳ ಮೇಲಾಗಲೀ, ಆಡುವ ಮಾತುಗಳ ಮೇಲಾಗಲೀ ಈಕೆಗ ಪ್ರಜ್ಞೆಯೇ ಇಲ್ಲದಷ್ಟು ಬುದ್ಧಿ ವಿಕಲ್ಪವಾಗಿ ಹೋಯಿತು.

ಮಂತ್ರಿಯಾದ ಕುತಂತ್ರಿಕರಾಯನ ಮನೆಗೆ ಸ್ವಲ್ಪದೂರದಲ್ಲಿ ಸಾಧಾರಣವಾದ ಒಂದು ನದಿಯು ಹರಿಯುತ್ತಿದ್ದಿತು. ಈ ನದಿಯ ಇಕ್ಕಡೆಗಳಲ್ಲಿಯೂ ಗಿಡವೃಕ್ಷಗಳು ಅಲ್ಲಲ್ಲಿ ಗುಂಪು ಗುಂಪಾಗಿಯೂ ದಟ್ಟವಾಗಿಯೂ ಬೆಳೆದು ನೋಡುವುದಕ್ಕೆ ಮನರಂಜಿತವಾಗಿದ್ದಿತು. ಪುಷ್ಪಮಾಲಿನಿಯು ಸ್ವಸ್ಥಚಿತ್ತಳಾಗಿದ್ದ ಸಮಯದಲ್ಲಿ ಆಗಾಗ್ಗೆ ತನ್ನ ಸಖೀ ಜನರೊಂದಿಗೆ ಆ ಪ್ರದೇಶಕ್ಕೆ ಹೋಗಿ ಜಲಕ್ರೀಡೆಯಾಡುತ್ತಾ ಅಲ್ಲಿನ ಸೃಷ್ಟಿಸೌಂದರ್ಯವನ್ನು ನೋಡಿ ಸಂತೋಷಪಡುತ್ತಾ ಒಂದೆ ರಡು ಗಂಟೆಗಳ ತರುವಾಯ ಮನೆಗೆ ಹೋಗುವ ವಾಡಿಕೆಯಿದ್ದಿತು. ಈಕೆಗೆ ಬುದ್ಧಿ ವಿಕಲ್ಪವಾದ ಕೆಲವು ದಿನಗಳಮೇಲೆ ತನ್ನ ತೋಟಕ್ಕೆ ಹೋಗಿ ಕೆಲವು ಹೂಗಳನ್ನು ಕಿತ್ತು ಉಡಿಯಲ್ಲಿಟ್ಟುಕೊಂಡು ಈ ನದೀ ಪ್ರಾಂತ್ಯಕ್ಕೆ ಯಾರಿಗೂ ಅರಿಯದಂತೆ ಒಂಟಿಯಾಗಿ ಹೋಗಿ

ಅಲ್ಲಿ ಬೆಳದಿದ್ದ ಕಾಡುಪುಷ್ಪಗಳನ್ನೂ ತುರಚೀ ಎಲೆಗಳನ್ನೂ ಬಳ್ಳಿಗಳನ್ನೂ ಕಿತ್ತು ತಾನು ತಂದಿದ್ದ ಹೂಗಳೊಳಗೆ ಬೆರಸಿ ದೊಡ್ಡ ದೊಡ್ಡ ಮಾಲೆಗಳನ್ನು ಮಾಡಿ ಕೈಗಳಲ್ಲಿ ಹಿಡಿದುಕೊಂಡು ಒಮ್ಮೆ ದುಃಖದಹಾಡನ್ನೂ ಇನ್ನೊಮ್ಮೆ ಸಂತೋಷದಹಾಡನ್ನೂ ಮತ್ತೊಮ್ಮೆ ಅರ್ಥವಿಲ್ಲದ ಮಾತುಗಳಿಂದೊಡಗೂಡಿದ ಹಾಡುಗಳನ್ನೂ ಹಾಡುತ್ತಾ ನದಿಯ ದಡದಲ್ಲಿ ತಿರುಗಾಡುತ್ತಾ ಒಂದು ನೀರನಂಚೀ ಮರದ ಸಮೀಪದಲ್ಲಿ ಬಂದು ನಿಂತಳು. ಆ ಮರದ ಕೊಂಬೆಗಳು ನೀರಿನ ಮೇಲೆ ಚಾಚಿಕೊಂಡಿದ್ದವು. ಈಕೆಯು ಬಹು ಕಷ್ಟದಿಂದ ಆ ಮರವನ್ನು ಹತ್ತಿ ಚಾಚಿಕೊಂಡಿದ್ದ ಆ ಕೊಂಬೆಗಳಿಗೆ ತನ್ನ ಕೈಯಲ್ಲಿದ್ದ ಪುಷ್ಪಮಾಲಿಕೆಗಳನ್ನು ಹಾಕುತ್ತಿರುವಾಗ ಆ ಕೊಂಬೆಯು ಆಕೆಯ ಭಾರಕ್ಕೆ ಮುರಿದು ಪುಷ್ಪಮಾಲಿಕೆಗಳೊಡನೆ ನೀರಿನಲ್ಲಿ ಬಿದ್ದುಬಿಟ್ಟಿತು. ತಾನು ನೀರಿನಲ್ಲಿ ಬಿದ್ದಿದ್ದೇನೆ ಎಂದು ತಿಳಿಯುವಷ್ಟು ಬುದ್ಧಿ ವಿಕಲ್ಪವಾಗಿದ್ದಿತು. ಮುಳುಗುತ್ತಾ ತೇಲುತ್ತಾ ಇದ್ದಾಗ್ಯೂ ಹಾಡುವುದನ್ನು ನಿಲ್ಲಿಸಲೇ ಇಲ್ಲ. ಕಡೆಗೆ ಆಕೆಯು ಶರೀರದ ಮೇಲಿದ್ದ ಉಡಿಗೆ ತೊಡಿಗೆಗಳೆಲ್ಲಾ ತೋಯ್ದು ಭಾರವಾಗಿ ಆ ನದಿಯಲ್ಲಿದ್ದ ಆಳವಾದ ಮಡುವು ಪುಷ್ಪಮಾಲಿನಿಯನ್ನು ಪುಷ್ಪಮಾಲಿಕೆಗಳೊಂದಿಗೆ ತನ್ನ ಗರ್ಭಾಶಯಕ್ಕೆ ಕರೆದೊಯ್ದು ಆಕೆಯ ಯಾವತ್ತೂ ದುಃಖವನ್ನು ಕೊನೆಗಾಣಿಸಿತು. ಹೀಗೆ ಯುವರಾಜನಾದ ನಸ್ತಾಪಕನ ಮನೋವಲ್ಲಭೆಯಾದ ಪುಷ್ಪಮಾಲಿನಿಯು ತನ್ನ ಪ್ರಿಯನಿಗೆ ಮರೆಯಾಗಿಹೋದಳು.

ಪುಷ್ಪಮಾಲಿನಿಯು ಈ ಸ್ಥಳಕ್ಕೆ ಬಂದುದು ಮನೆಯವರಿಗೆ ಯಾರಿಗೂ ತಿಳಿಯದು. ಬಂಧುಗಳ ಮನೆಗಳಲ್ಲಿಯೂ ಮಿತ್ರರ ಮನೆಗಳಲ್ಲಿಯೂ ಅರಮನೆಯಲ್ಲಿಯೂ ಹುಡುಕಿದಾಗ್ಯೂ ಆಕೆಯು

ಎಲ್ಲಿಯೂ ಸಿಕ್ಕಲಿಲ್ಲ. ತಮ್ಮ ಮನೆಯ ಪ್ರತಿಯೊಂದು ಕೊಠಡಿಯನ್ನೂ ನೋಡಿದ್ದಾಯಿತು, ಇಲ್ಲ. ತಾಯಿಗೂ ಅಣ್ಣನಿಗೂ ಬಹಳ ಚಿಂತೆಗೆ ಕಾರಣವಾಯಿತು. ಇಡೀ ಪಟ್ಟಣದಲ್ಲಿ ಪುಷ್ಪಮಾಲಿನಿಯನ್ನು ಹುಡುಕದ ಸ್ಥಳವೇ ಇಲ್ಲ. ಅಣ್ಣನಾದ ಮೃದುಹೃದಯನು ತಂಗಿಯನ್ನು ಹುಡುಕಲು ತಾನೇ ಹೊರಟನು. ಎಲ್ಲಿಯೂ ಸಿಕ್ಕಲಿಲ್ಲ. ಕಡಗೆ ನದೀ ಪ್ರಾಂತ್ಯಕ್ಕೆ ಬಂದು ಅಲ್ಲಲ್ಲಿ ಬಿದ್ದಿರುವ ಹೂವುಗಳನ್ನು ನೋಡಿ ತನ್ನ ತಂಗಿಯು ಇಲ್ಲಿಯೇ ಎಲ್ಲೋ ಇರಬೇಕೆಂದು ಊಹಿಸಿ ಹುಡುಕುತ್ತಾ ಆ ದೊಡ್ಡ ಮಡುವಿನ ಬಳಿಗೆ ಬಂದು ತಲೆ ಎತ್ತಿ ನೋಡಲಾಗಿ ಒಂದು ಕೊಂಬೆಯಲ್ಲಿ ಪುಷ್ಪಮಾಲಿಕೆಯ ಒಂದು ತುಂಡು ಸಿಕ್ಕಿಕೊಂಡಿರುವುದನ್ನೂ, ಒಂದೆರಡು ಕೊಂಬೆಗಳು ಮುರಿದು ಮಡುವಿನಲ್ಲಿ ಬಿದ್ದಿರುವುದನ್ನೂ ನೋಡಿ ತಂಗಿಗೆ ಇಲ್ಲಿಯೇ ಏನೋ ಅಪಾಯವಾಗಿದೆಯೆಂದು ತಿಳಿದು ಪಟ್ಟಣದೊಳಕ್ಕೆ ಹೋಗಿ ಸೇವಕರನ್ನು ಕರೆದುಕೊಂಡು ಬಂದು ಮಡುವಿನಲ್ಲಿಳಿಸಿ ನೋಡುವಾಗ ಪ್ರಿಯತಂಗಿಯ ಮೃತ ಶರೀರವು ಸಿಕ್ಕಿತು. ಅದನ್ನು ನೋಡಿದಾಕ್ಷಣವೇ ಹೆಚ್ಚು ಮಾತುಗಳನ್ನಾಡುವುದಕ್ಕೆ ಬಾಯಿಬಾರದೆ, ಹಾ ! ತಂಗೀ ! ಸಹೋದರೀ ! ಸಹೋದರೀ! ಎಂದು ತೊದಲುಶಬ್ದಗಳಿಂದ ನುಡಿಯುತ್ತಾ ದುಃಖವು ಮಿತಿಮೀರಿ ಮೂರ್ಛಿತನಾದನು. ಸೇವಕರೆಲ್ಲರಿಗೂ ಬಹಳ ಘಾಬರಿಯಾಯಿತು. ಅನೇಕವಿಧವಾಗಿ ಶೈತ್ಯೋಪಚಾರಗಳನ್ನು ಮಾಡಿದರು. ಎಲ್ಲವೂ ನಿಷ್ಪ್ರಯೋಜನವಾದವು. ಇನ್ನು ಸುಮ್ಮನಿರಬಾರದೆಂದು ತಿಳಿದು ಪಟ್ಟಣದೊಳಕ್ಕೆ ಹೋಗಿ ಮೃದುಹೃದಯನ ತಾಯಿಗೂ ಬಂಧುವರ್ಗದವರಿಗೂ ಸಂಗತಿಗಳ್ಯಾವತ್ತನ್ನೂ ಹೇಳಿದರು. ಕೂಡಲೇ ತಾಯಿಯೂ ಬಂಧುವರ್ಗದವರೂ ಸೇವಕಸೇವಕಿಯರೂ ನದಿಯ ಸಮೀಪಕ್ಕೆ ಬಂದರು. ಇಷ್ಟರಲ್ಲಿ ಮೃದುಹೃದಯನು

ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಳ್ಳುತ್ತಿದ್ದನು. ಮೃತಳಾಗಿ ಕೈಕಾಲುಗಳು ಸೆಳೆದುಕೊಂಡು ಭೂಮಿಯಮೇಲೊರಗಿರುವ ಪ್ರಿಯ ಮಗಳ ಶವವನ್ನು ನೋಡಿದ ತಾಯಿಗೆ ಉಂಟಾದ ದುಃಖವು ಎಷ್ಟೆಂಬುದು ಮಕ್ಕಳನ್ನು ಕಳೆದುಕೊಂಡ ತಾಯಂದಿರಿಗೇ ಹೊರತು ಬೇರೆಯವರಿಗೆ ತಿಳಿದೀತೇ? ಹೌದು, ಒಂಭತ್ತು ತಿಂಗಳು ಹೊತ್ತು ಹೆತ್ತು ಸಾಕಿ ಸಲಹಿ ಪ್ರಾಯದ ಮಕ್ಕಳನ್ನಾಗಿ ಮಾಡಿದ ಮೃದುಹೃದಯರಾದ ಪ್ರಿಯ ತಾಯಂದಿರಿಗೆ ಈ ದುಃಖಾನುಭವವು ಬಹು ಚೆನ್ನಾಗಿದೆ.

ಇಷ್ಟರಲ್ಲಿ ಮೃದುಹೃದಯನೂ ಚೇತರಿಸಿಕೊಂಡನು. ಸೂರ್ಯನೂ ಅಸ್ತಮಿಸುತ್ತಾ ಬಂದನು. ಶವವು ಮನೆಗೆ ಸಾಗಿಸಲ್ಪಟ್ಟಿತು. ಆ ರಾತ್ರಿ ಮಂತ್ರಿಯ ಮನೆಯಲ್ಲಾದ ರೋಧನಧ್ವನಿಯು ಪಟ್ಟಣವೆಲ್ಲಾ ಪ್ರತಿಧ್ವನಿಗೈಯ್ಯುತ್ತಿದ್ದಿತು. ಗತಿಸಿದ ಪುಷ್ಪಮಾಲಿನಿಯು ತಮ್ಮ ಪ್ರಿಯ ಯುವರಾಜನ ಧರ್ಮಪತ್ನಿಯಾಗಿ ಮುಂದೆ ತಮ್ಮ ಮಹಾರಾಣಿಯಾಗುತ್ತಾಳೆಂಬ ಸಂಗತಿಯು ಪ್ರಜೆಗಳೆಲ್ಲರಿಗೂ ಹೇಗೋ ತಿಳಿದಿದ್ದುದರಿಂದ ಆ ರಾತ್ರಿ ಯಾರೂ ನಿದ್ರಿಸದೆ ತಮ್ಮ ದುರಾದೃಷ್ಟವನ್ನು ನಿಂದಿಸುತ್ತಾ ಅಕಟಾ! ಈ ವರ್ತಮಾನವು ಯುವರಾಜನಿಗೆ ತಿಳಿದುಬಂದರೆ ಆತನು ಜೀವದಿಂದಿರುವುದು ನಿಜವೇ! ಎಂದು ಹಲವು ವಿಧವಾಗಿ ಮಾತನಾಡಿಕೊಳ್ಳುತ್ತಾ ಜಾಗರಣೆ ಮಾಡುವವರಾದರು.

---

# ಅಧ್ಯಾಯ 10

---

## ಪುಷ್ಪಮಾಲಿನಿಯ ಶವಸಂಸ್ಕಾರ.

ಸನ್ತಾಪಕನು ಚಂದ್ರಗಿರಿ ನಗರವನ್ನು ಬಿಟ್ಟಂದಿನಿಂದ ಮಿತ್ರನಾದ ಸೌಮಿತ್ರಕನಿಗೆ ಸನ್ತಾಪಕನ ವಿಷಯವಾಗಿ ಯಾವ ಸಮಾಚಾರವೂ ತಿಳಿಯದಿದ್ದುದರಿಂದ ಬಹುವ್ಯಥೆಗೊಳಗಾಗಿದ್ದನು. ಆದುದರಿಂದ ಸನ್ತಾಪಕನ ಪತ್ರವನ್ನು ನೋಡಿದ ಕೂಡಲೇ ಹೊರಟು ಆತನಿದ್ದಲ್ಲಿಗೆ ಬಂದನು. ಮಿತ್ರನನ್ನು ನೋಡಿ ಸನ್ತಾಪಕನಿಗೆ ಉಂಟಾದ ಸಂತೋಷವನ್ನು ಹೇಳತೀರದು. ಕಡಲುಗಳ್ಳರ ಸಮಾಚಾರವನ್ನೂ, ಭುಜಂಗಮನು ತನ್ನನ್ನು ಕೊಲ್ಲಲು ಮಾಡಿದ ಯುಕ್ತಿಯನ್ನೂ, ಅದಕ್ಕೆ ಪ್ರತಿಯಾಗಿ ತಾನು ಮಾಡಿದ ತಂತ್ರವನ್ನೂ ಮಿತ್ರನಿಗ ತಿಳಿಸಿದನು. ಮಿತ್ರರಿಬ್ಬರೂ ಮತ್ತೊಂದಾವರ್ತಿ ಒಬ್ಬರನ್ನೊಬ್ಬರು ನೋಡಿದ್ದಕ್ಕಾಗಿ ಸಂತೋಷಪಡುತ್ತಾ ಚಂದ್ರಗಿರಿಗೆ ಪ್ರಯಾಣಮಾಡುತ್ತಾ ಕಡೆಗೆ ನಗರದ ಸ್ಮಶಾನದ ಬಳಿಗೆ ಬಂದರು. ಇಬ್ಬರು ಕೂಲಿಯವರು ಅವಸರವಸರವಾಗಿ ಸಮಾಧಿ ಅಗೆಯುವುದನ್ನು ನೋಡಿ ಸಂಗತಿಯನ್ನು ವಿಚಾರಿಸಲಾಗಿ, ಶ್ರೀಮಂತಳಾದ ಯುವತಿಯೊಬ್ಬಳು ಮೃತಳಾಗಿರುವುದಾಗಿಯೂ ಆಕೆಗಾಗಿಯೇ ಕುಳಿಯನ್ನು ಅಗೆಯುವುದಾಗಿಯೂ ಹೇಳಿದರು. ಇವರಿಬ್ಬರೂ ಕೂಲಿಯವರೊಂದಿಗೆ ಮಾತನಾಡುತ್ತಾ ಮೃತಳಾದ ಯುವತಿಯು ಯಾರಿರಬಹುದೆಂದು ಆಲೋಚಿಸುತ್ತಿರುವಾಗ ಚಂದ್ರಗಿರಿನಗರದ ಸಾವಿರಾರು ಜನರು ಬಹು ಆಡಂಬರದಿಂದ ಒಂದು ಶವವನ್ನು ಮೆರವಣಿಗೆ ಮಾಡಿಕೊಂಡು ಬರುತ್ತಿದ್ದರು. ಈ ಮೆರವಣಿಗೆಯಲ್ಲಿ ಮಹಾರಾಜನೂ ಮಹಾರಾಣಿಯೂ ನಗರಾಧಿಕಾರಿಗಳೂ ವರ್ತಕ ಮಹಾಶಯರೇ

ಮೊದಲಾದ ಪ್ರಜೆಗಳೂ ಇರುವುದನ್ನು ನೋಡಿ ನಗರದಲ್ಲಿ ಯಾರೋ ಪ್ರಾಮುಖ್ಯರಾದವರೇ ಮೃತರಾಗಿರಬಹುದೆಂತಲೂ, ಹಾಗಿಲ್ಲದಿದ್ದರೆ ಇಷ್ಟು ಜನರು ಮುಖ್ಯವಾಗಿ ಮಹಾರಾಜನೂ ಮಹಾರಾಣಿಯೂ ಬರಲು ಕಾರಣವಿಲ್ಲವೆಂತಲೂ ಯೋಚಿಸಿ ಜನರು ಸಮೀಪವಾಗುತ್ತಾ ಬಂದುದರಿಂದ ಇವರಿಬ್ಬರೂ ಯಾರಿಗೂ ಕಾಣಿಸಿ ಕೊಳ್ಳದೆ ಮರೆಯಲ್ಲಿ ನಿಂತು ಮೃತರಾದವರು ಯಾರಿರಬಹುದೆಂದು ನೋಡುತ್ತಿದ್ದರು.

ಶವವು ಸಮಾಧಿಯ ಬಳಿಗೆ ತರಲ್ಪಟ್ಟಿತು. ಜನರೆಲ್ಲರೂ ಸಮಾಧಿಯ ಸುತ್ತಲೂ ನಿಂತರು. ಶವಸಂಸ್ಕಾರವನ್ನು ಆಚರಿಸಿ ದ್ದಾಯಿತು. ಶವವು ಕುಳಿಯೊಳಗಿಳಿಸಲ್ಪಟ್ಟಿತು. ಮರ್ಯಾದೆ ಯಂತೆ ಮಹಾರಾಜನಾದ ಭುಜಂಗಮನೂ ಮಹಾರಾಣಿಯೂ ಕುಳಿಯ ಸಮೀಪಕ್ಕೆ ಬಂದರು. ಮಹಾರಾಣಿಯು ಕುಳಿಯೊಳಕ್ಕೆ ಹೂವುಗಳನ್ನು ಎರಚುತ್ತಾ—“ ಹಾ ! ಪುಷ್ಪಮಾಲಿನೀ, ನನ್ನ ಮಗ ನಾದ ಸನ್ತಾಪಕನಿಗೆ ನಿನ್ನನ್ನು ಧರ್ಮಪತ್ನಿಯನ್ನಾಗಿ ತೆಗೆದುಕೊಳ್ಳ ಬೇಕೆಂದಿದ್ದೆನಲ್ಲಾ ! ಆ ವಿವಾಹದ ದಿನ ನಿನ್ನನ್ನು ಪುಷ್ಪಗಳಿಂದಲಂ ಕರಿಸಿ, ನಿನ್ನ ರೂಪಾತಿಶಯವನ್ನು ನೋಡಿ ಸಂತೋಷಪಡಬೇಕೆಂ ದಿದ್ದ ನಾನು ಈಗ ನಿನ್ನ ಶವವನ್ನು ಈ ಪುಷ್ಪಗಳಿಂದಲಂಕರಿಸ ಬೇಕಾಗಿ ಬಂದಿತೇ ! ಕುವರೀ ! ನಿನ್ನ ಮರಣದ ವಾರ್ತೆಯನ್ನು ನನ್ನ ಮಗನಾದ ಸನ್ತಾಪಕನು ಕೇಳಿದರೆ ಎಷ್ಟು ದುಃಖಿಸುವನೋ ! ಅವನ ಬುದ್ಧಿಯು ಮತ್ತಷ್ಟು ವಿಕಲ್ಪವಾಗಲು ಕಾರಣವಾಯಿತೇ !” ಎಂದು ನಿಟ್ಟುಸಿರುಬಿಟ್ಟಳು. ಬಂದಿದ್ದವರೆಲ್ಲರೂ ಹೂಗಳನ್ನೂ ಸ್ವಲ್ಪ ಸ್ವಲ್ಪ ಮಣ್ಣನ್ನೂ ಕುಳಿಯಲ್ಲಿ ಹಾಕಲು ಪ್ರಾರಂಭಿಸಿದರು. ಪುಷ್ಪಮಾಲಿನಿಯ ಅಣ್ಣನಾದ ಮೃದುಹೃದಯನೋ ದುಃಖವನ್ನು

ಸಹಿಸಲಸಾಧ್ಯವಾಗಿ—"ಹಾ! ತಂಗೀ! ಪುಷ್ಪಮಾಲಿನೀ! ನಿನ್ನ ಕೋಮಲವಾದ ಶರೀರದಮೇಲೆ ಮಣ್ಣಿರಚಿ ನಿನ್ನನ್ನು ಭೂಸ್ಥಾಪನೆ ಮಾಡಲೆಂತು? ಅಮ್ಮಯ್ಯಾ! ಅಮ್ಮಣ್ಣೀ! ಎಂದು ಇನ್ನು ಯಾರನ್ನು ಕರೆಯಲಿ? ಇನ್ನುಮೇಲೆ ನನ್ನನ್ನು ಅಣ್ಣಾ! ಎಂದು ಯಾರು ಕರೆಯುವರು? ನಿನ್ನನ್ನು ಈ ಭಯಂಕರವಾದ ಸ್ಮಶಾನದಲ್ಲಿ ಒಂಟಿಯಾಗಿ ಮಲಗಿಸಿ ನಾನೊಬ್ಬನೇ ಹೇಗೆ ಮನೆಗೆ ಹೋಗಲಿ? ಹಾ! ಸ್ವಾಮಿಯೇ! ನನ್ನ ಸಂತೋಷವೆಲ್ಲಾ ಇಂದಿಗ ಸಮಾಪ್ತವಾಯಿತೇ! ತಂಗೀ! ಪ್ರಿಯ ತಂದೆಯನ್ನೂ ಕಳೆದುಕೊಂಡೆನು; ನಿನ್ನನ್ನೂ ಕಳೆದುಕೊಂಡೆನು. ಇನ್ನು ಯಾವ ಸುಖಸಂತೋಷಕ್ಕಾಗಿ ನಾನು ಜೀವಿಸಿರಬೇಕಾಗಿದೆ? ಅಮ್ಮಾ! ನಿನ್ನನ್ನು ಬಿಟ್ಟು ಹೋಗಲಾರೆನು. ನಾನೂ ನಿನ್ನೊಂದಿಗೆ ಬರುತ್ತೇನೆ ಎಂದು ಕುಳಿಯಲ್ಲಿ ಧುಮುಕಿ ಬೇಗನೆ ತನ್ನನ್ನು ಮಣ್ಣಿನಿಂದ ಮುಚ್ಚಿಬಿಡುವಹಾಗೆ ಜನರನ್ನು ಬೇಡಿಕೊಂಡನು.

ಮರೆಯಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಾ, ತಾಯಿಯೂ ಮೃದುಹೃದಯನೂ ಆಡಿದ ಮಾತುಗಳನ್ನು ಕೇಳುತ್ತಾ ನಿಂತಿದ್ದ ಸನ್ತಾಪಕನಿಗೆ ಮೃತಿಹೊಂದಿರುವವಳು ತನ್ನ ಪ್ರಿಯಳಾದ ಪುಷ್ಪ ಮಾಲಿನಿಯೇ ಎಂದು ಮನಸ್ಸಿಗೆ ಖಚಿತವಾಗಿ, ಆರಿ ತಣ್ಣಗಾಗಿದ್ದ ಪ್ರೇಮಜ್ವಾಲೆಯು ಈಗ ಹೃದಯದಲ್ಲಿ ಪ್ರಜ್ವಲಿಸಿ ಶರೀರಾದ್ಯಂತವನ್ನೂ ಭಸ್ಮಮಾಡುತ್ತಿದೆಯೋ ಎಂಬಂತಾಗಿ "ಹಾ! ನನ್ನ ಪ್ರಿಯೇ! ಪುಷ್ಪಮಾಲಿನೀ! ನಿನ್ನ ಅಕಾಲಮರಣಕ್ಕೆ ನಾನೇ ಕಾರಣನಾದೆನೇ! ಇನ್ನು ನಾನೇಕೆ ಜೀವಿಸಲಿ? ಜೀವಿಸಿ ಮಾಡುವುದೇನಿದೆ? (ಸೌಮಿತ್ರಕನ ಕಡೆಗೆ ನೋಡಿ) ಮಿತ್ರಾ! ಇನ್ನು ನನ್ನ ದುಃಖವನ್ನು ಸಹಿಸಲಾರೆನು. ಯಾವ ಮಾತನ್ನಾಡುವುದಕ್ಕೂ ಬಾಯಿ ಬರುವುದಿಲ್ಲ.

ಯಾವುದನ್ನು ಯೋಚಿಸುವುದಕ್ಕೂ ಬುದ್ಧಿ ಸ್ಥಿಮಿತವಿಲ್ಲ. ಕಣ್ಣೂ ಹೃದಯವೂ ದುಃಖದಿಂದ ಮೊಬ್ಬಾದವು. ಆಕೆಯಮೇಲೆ ನನಗಿರುವ ಪ್ರೀತಿಗಿಂತಲೂ ಆಕೆಯ ಅಣ್ಣನಿಗೆ ಹೆಚ್ಚು ಪ್ರೀತಿಯಿದೆಯೇ? ಇದು ಅಸಾಧ್ಯ. ಕುಳಿಯಲ್ಲಿ ಬಿದ್ದು ಆಕೆಯೊಂದಿಗೆ ನಾನೂ ಸಹ ಭೂಸ್ಥಾಪನೆಯಾಗುತ್ತೇನೆಂದು ಹೇಳಿ ಸಮಾಧಿಯ ಸುತ್ತಲೂ ಸುತ್ತಿಕೊಂಡಿದ್ದ ಜನರನ್ನು ಒತ್ತರಿಸಿ ಓಡಿಬಂದು ಪ್ರಿಯಳಾದ ಪುಷ್ಪಮಾಲಿನಿಯ ಸಮಾಧಿಯಲ್ಲಿ ಧುಮುಕಿದನು. ಇದನ್ನು ನೋಡಿ ಎಲ್ಲರಿಗೂ ವಿಸ್ಮಯವಾಯಿತು. ಕುಳಿಯಲ್ಲಿ ಮೊದಲೇ ಬಿದ್ದಿದ್ದ ಮೃದುಹೃದಯನು ಇವನನ್ನು ನೋಡಿದಕೂಡಲೇ ಕರಾಳವದನನಾಗಿ ಎಲಾ! ಸನ್ತಾಪಕಾ, ನೀಚಾ, ನನ್ನ ತಂದೆಯ ಮರಣಕ್ಕೂ ನನ್ನ ತಂಗಿಯ ಮರಣಕ್ಕೂ ಕಾರಣನು ನೀನೇ ಅಲ್ಲವೇ? ಇಷ್ಟು ದಿನಗಳೂ ಕಳ್ಳನಂತೆ ತಲೆ ಮರೆಸಿಕೊಂಡು ಎಲ್ಲಿದ್ದೆ? ಈಗ ಸಿಕ್ಕಿದೆಯಾ? ನಿನ್ನ ಕ್ರೌರ್ಯದಿಂದ ನನ್ನ ತಂದೆಯನ್ನೂ ತಂಗಿಯನ್ನೂ ಹತಮಾಡಿದ್ದು ಸಾಲದೆ, ನನ್ನನ್ನು ಹತಮಾಡಿ, ನನ್ನ ಪ್ರಿಯ ತಂಗಿಯ ಮೃತದೇಹವನ್ನು ಅವಮಾನಮಾಡಲು ಬಂದೆಯಾ? ಎಂದು ಕುತ್ತಿಗೆಗೆ ಕೈಹಾಕಿ ಕೊಲ್ಲುವುದಕ್ಕೆ ನಡುವಿನಲ್ಲಿದ್ದ ಖಡ್ಗವನ್ನು ಒರೆಯಿಂದ ಸೆಳೆದು ಮೇಲಕ್ಕೆ ಎತ್ತಿದನು. ಈ ಅಸಂಗತವಾದ ಕಾರ್ಯವನ್ನು ನೋಡಿ ಎಲ್ಲರಿಗೂ ಭಯವಾಗಿ ಇಬ್ಬರನ್ನೂ ಮೇಲಕ್ಕೆ ಎತ್ತಿ ಸಮಾಧಾನಮಾಡಿದರು. ಕುಳಿಯಿಂದ ಮೇಲಕ್ಕೆ ಬಂದಮೇಲೆ ತಾನು ಆತುರಪಟ್ಟುಮಾಡಿದ ಕಾರ್ಯಕ್ಕಾಗಿ ಸನ್ತಾಪಕನು ಪಶ್ಚಾತ್ತಾಪಪಟ್ಟು ಮೃದುಹೃದಯನನ್ನು ಕುರಿತು— ಮಿತ್ರಾ, ನಿನ್ನ ಪ್ರಿಯ ತಂಗಿಯ ಮೃತದೇಹವನ್ನು ಅಪಮಾನ ಮಾಡಬೇಕೆಂದಾಗಲೀ ನಿನ್ನನ್ನು ಹತಮಾಡಬೇಕೆಂದಾಗಲೀ ನಾನು ಸಮಾಧಿಯೊಳಗೆ ಧುಮುಕಲಿಲ್ಲ. ಹೌದು, ಅಚಾತುರ್ಯದಿಂದ

ನಿನ್ನ ಪ್ರಿಯ ತಂದೆಯನ್ನು ಕೊಂದ ಅಮಾನುಷಕೃತ್ಯಕ್ಕಾಗಿ ನಾನು ಪಟ್ಟ ದುಃಖವೂ, ಹೃದಯದಲ್ಲಿ ಅನುಭವಿಸಿದ ವೇಧನೆಯೂ ಎಷ್ಟೆಂಬುದು ದೇವರಿಗೆ ಹೊರತು ನಿನಗಾಗಲೀ ಮತ್ತ್ಯಾರಿಗಾಗಲೀ ತಿಳಿಯದು. ನಾನು ನಿನ್ನನ್ನು ಕೊಲ್ಲಲು ನೀನು ಮಾಡಿದ ಅಪರಾಧವೇನು ? ನಾವಿಬ್ಬರೂ ಬಾಲ್ಯಸ್ನೇಹಿತರಲ್ಲವೇ ? ಯಥಾರ್ಥವನ್ನು ವಿಚಾರಿಸಿದರೆ ನಿನಗೆ ನಿನ್ನ ತಂಗಿಯಮೇಲಿದ್ದ ಪ್ರೀತಿಗಿಂತಲೂ ನನಗೆ ಆಕೆಯಮೇಲೆ ಸಾವಿರಾರು ಪಾಲು ಹೆಚ್ಚಾಗಿದೆ. ಇನ್ನು ಕೆಲವು ದಿನಗಳೊಳಗಾಗಿಯೇ ಆಕೆಯು ನನ್ನ ಧರ್ಮಪತ್ನಿಯಾಗುತ್ತಿದ್ದಳೆಂಬ ಸಂಗತಿಯು ನಿನಗೆ ತಿಳಿಯದೆ ಇಲ್ಲ. ಮೃದುಹೃದಯಾ ! ನನ್ನ ಮೇಲಿರುವ ದ್ವೇಷವನ್ನು ಬಿಡು. ಎಂದಿನಂತೆಯೇ ನಾವಿಬ್ಬರೂ ಮಿತ್ರರಾಗಿಯೇ ಇರೋಣ ಎಂದು ಹೇಳಿ ಸೌಮಿತ್ರಕನೊಂದಿಗೆ ಪಟ್ಟಣದೊಳಕ್ಕೆ ಹೋಗಿ ತನ್ನ ನಿಜಭವನವನ್ನು ಸೇರಿದನು. ಸೌಮಿತ್ರಕನು ಪುನಹ ಬರುವುದಾಗಿ ಹೇಳಿ ತನ್ನ ಮನೆಗೆ ಹೊರಟುಹೋದನು. ಸ್ಮಶಾನದ ಬಳಿ ಇದ್ದವರೆಲ್ಲರೂ ಪುಷ್ಪಮಾಲಿನಿಯ ಶವಸಂಸ್ಕಾರದ ತರುವಾಯ ಚಿಂತೆಯಿಂದಲೂ ಅನೇಕ ತರವಾದ ಯೋಚನೆಗಳಿಂದಲೂ ಸ್ವಗೃಹಗಳಿಗೆ ಹಿಂದಿರುಗಿದರು. ಆ ದಿನ ಎಲ್ಲಿ ನೋಡಿದಾಗ್ಯೂ ಜನಗಳ ಗುಂಪು. ಯಾರ ಬಾಯಿಯಲ್ಲಿ ಕೇಳಿದರೂ ಸನ್ತಾಪಕನೂ ಮೃದುಹೃದಯನೂ ಕುಳಿಯಲ್ಲಿ ಬಿದ್ದ ಸಮಾಚಾರವೇ. ಬೇರ ಯಾವುದೂ ಇಲ್ಲ. ಸನ್ತಾಪಕನು ಪ್ರಯಾಣದಿಂದ ಬಹಳ ದಣಿದಿದ್ದುದರಿಂದ ಸ್ವಲ್ಪ ವಿಶ್ರಾಂತಿ ಪಡೆಯಲು ಮಂಚದಮೇಲೆ ಮಲಗಿಕೊಂಡನು. ಕಣ್ಣು ಮುಚ್ಚಲಾಗಲಿಲ್ಲ. ಅವಿಶ್ರಾಂತಿಯು ಮತ್ತಷ್ಟು ಹೆಚ್ಚಾಯಿತು.

---

# ಅಧ್ಯಾಯ 11

## ವಿಷಖಡ್ಗ

ಎಷ್ಟು ಪ್ರಯತ್ನಿಸಿದಾಗ್ಯೂ ನಸಾ್ಪಕನಿಗೆ ಸಮಾಧಾನವಾಗಲಿಲ್ಲ. ಥಟ್ಟನೆ ಎದ್ದು ತೋಟಕ್ಕೆ ಬಂದನು. ಆಗ ಮಧ್ಯಾಹ್ನ ಮೂರು ಘಂಟೆಯ ಸಮಯವಾಗಿದ್ದಿತು. ತನ್ನ ತಂದೆಯು ವಾಡಿಕೆಯಾಗಿ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದ ಸ್ಥಳಕ್ಕೆ ಹೋದನು. ತಂದೆಯು ಯಾವ ಸ್ಥಳದಲ್ಲಿ ವಿಷಮೂಲಿಕೆಯ ಪ್ರಯೋಗದಿಂದುಂಟಾದ ತಾಪ ದಿಂದ ಸಂಕಟಪಟ್ಟನೋ ಆ ಸ್ಥಳವನ್ನು ನೋಡಿದಕೂಡಲೇ ತಂದೆಯ ವಿಷಯವಾದ ದುಃಖವೂ, ಭುಜಂಗಮನ ಮೇಲಿದ್ದ ಕೋಪವೂ, ಪಿತೃಭೂತಕ್ಕೆ ಮಾಡಿದ್ದ ವಾಗ್ದಾನವನ್ನು ಇನ್ನಾದರೂ ಪೂರೈಸ ದಿದ್ದುದಕ್ಕೆ ನಾಚಿಕೆಯೂ ದ್ವಿಗುಣವಾಗಿ ಬಹು ಸಂಕಟಪಟ್ಟನು. ಅಲ್ಲಿಯೇ ಬಹಳಹೊತ್ತು ಇದ್ದು ತಾನೂ ಪುಷ್ಪಮಾಲಿನಿಯೂ ಕುಳಿತು ಮಾತನಾಡುತ್ತಿದ್ದ ಸ್ಥಳಕ್ಕೆ ಹೋಗಿ ಆಕೆಯ ನೆನಪಿನಿಂದ ಬಹಳವಾಗಿ ದುಃಖಿಸಿದನು. ಇಷ್ಟರಲ್ಲಿ ಸಾಯಂಕಾಲವಾಗುತ್ತಾ ಬಂದಿತು. ಮಿತ್ರನಾದ ಸೌಮಿತ್ರಕನು ಎಂದಿನಂತೆ ಯುವರಾಜನ ದರ್ಶನಕ್ಕಾಗಿ ಬಂದು ತೋಟದಲ್ಲಿಯೇ ಬಹಳ ಹೊತ್ತಿನವರೆಗೂ ಮಾತನಾಡಿಕೊಂಡಿದ್ದು ಬಹಳ ಕತ್ತಲಾದುದರಿಂದ ಒಬ್ಬರನ್ನೊಬ್ಬರು ಬೀಳ್ಕೊಂಡು ತಮ್ಮ ಮನೆಗಳಿಗೆ ಹೊರಟುಹೋದರು.

ಇತ್ತ ಅರಸನಾದ ಭುಜಂಗಮನು ತನ್ನ ಕೊಠಡಿಯಲ್ಲಿ ಒಂಟಿಗ ನಾಗಿ ಕುಳಿತುಕೊಂಡು ರಪಿನಗರಾಧಿಪತಿಯಿಂದ ಬಂದ ಪತ್ರವನ್ನು ಓದಿ—ಆಹಾ! ಮೋಸವಾಯಿತು. “ ತಮ್ಮ ಪತ್ರದಲ್ಲಿ ನಿರೂಪಿಸಿ

ದಂತೆ ಇಬ್ಬರು ಅಧಿಕಾರಿಗಳ ಶಿರಚ್ಛೇದನ ಮಾಡಿದ್ದೇನೆ." ನಾನು ಈತನಿಗೆ ಸನ್ತಾಪಕನನ್ನು ಕೊಲ್ಲಬೇಕೆಂದು ಬರೆದಿದ್ದರೆ, ನನ್ನ ಇಬ್ಬರು ಅಧಿಕಾರಿಗಳನ್ನು ಕೊಂದಿದ್ದಾನಲ್ಲಾ! ಇದು ಹೇಗಾಗಿರ ಬಹುದು? ನನ್ನ ಕಾಗದವು ಸನ್ತಾಪಕನ ಕೈಗೇನಾದರೂ ಸಿಕ್ಕಿರ ಬಹುದೇ? ತನ್ನ ಹೆಸರಿಗೆ ಬದಲಾಗಿ ಅವರಿಬ್ಬರ ಹೆಸರುಗಳನ್ನು ಬರೆದಿರಬಹುದೇ? ಇಲ್ಲದಿದ್ದರೆ ರವಿನಗರಾಧಿಪತಿಗೆ ಅವರಿಬ್ಬರ ಶಿರಚ್ಛೇದನ ಮಾಡಲು ಧೈರ್ಯ ಹೇಗೆತಾನೇ ಬಂದೀತು? ಈ ಮೋಸಕೃತ್ಯವು ಸನ್ತಾಪಕನಿಂದಲೇ ಆಗಿದೆ. ನನ್ನ ಗುಟ್ಟು ಹೊರ ಬಿದ್ದಿತಲ್ಲಾ! ಏನುಮಾಡಲಿ? ಈ ಸಂಗತಿಯನ್ನು ಇವನು ಪುರ ಜನರಿಗೆ ತಿಳಿಸಿದರೆ ಅವರು ನನ್ನನ್ನು ಬಿಟ್ಟಾರೆ? ನಾನು ಇವನನ್ನು ರವಿನಗರಕ್ಕೆ ಕಳುಹಿಸಿದಾಗಲೇ ಜನರಲ್ಲಿ ಅಸಮಾಧಾನವು ತಲೆ ದೋರಿದಂತಿದ್ದಿತು. ಎಂತಹ ಉಪಾಯವನ್ನು ಮಾಡಿದಾಗ್ಯೂ ಪ್ರಾಣವನ್ನು ದಕ್ಕಿಸಿಕೊಂಡು ಬಂದನಲ್ಲಾ! ಇವನು ಪ್ರಾಣ ಧರಿಸಿ ಇರುವವರೆಗೂ ನನಗೆ ಗಂಡಾಂತರವೆಂದೇ ಹೇಳಬೇಕು. ಇವನನ್ನು ಯಾವ ಉಪಾಯದಿಂದ ಕೊಲ್ಲಲಿ? ನನ್ನ ಆಪ್ತರಾದವರನ್ನೆಲ್ಲಾ ಒಬ್ಬೊಬ್ಬರನ್ನಾಗಿ ಯಮಪುರಿಗೆ ಸಾಗಕಳುಹಿಸುತ್ತಿದ್ದಾನೆ. ನನ್ನ ಆಪ್ತರೆಲ್ಲರೂ ಹೋದಮೇಲೆ ನನ್ನ ಕೋರಿಕೆಯು ನೆರವೇರುವ ಬಗೆ ಹೇಗೆ? ನಾನು ತಕ್ಷಣವೇ ಎಚ್ಚರಿಕೆಯನ್ನು ತೆಗೆದುಕೊಳ್ಳದೆ ಹೋದರೆ ನನಗೆ ಉಳಿಗಾಲವೇ ಇಲ್ಲವೆಂದು ಹೇಳಬೇಕು ಎಂದು ಮನಸ್ಸಿನಲ್ಲಿ ಆಲೋಚಿಸುತ್ತಾ ಸ್ವಲ್ಪಹೊತ್ತಿನ ತರುವಾಯ ಸೇವಕ ನೊಬ್ಬನನ್ನು ಕರೆದು—ತಕ್ಷಣವೇ ಹೋಗಿ ಮಂತ್ರಿ ಕುಮಾರನಾದ ಮೃದುಹೃದಯನನ್ನು ಕರೆದುಕೊಂಡು ಬಾ, ತಡಮಾಡಬೇಡ ಎಂದು ಹೇಳಿಕಳುಹಿಸಿ ನಾನಾತರಹವಾದ ದುರಾಲೋಚನೆಗಳನ್ನು ಮಾಡುತ್ತಾ ಮಂತ್ರಿಕುಮಾರನ ಬರುವಿಕೆಯನ್ನು ಎದುರು ನೋಡು

ತ್ತಿದ್ದನು. ಇಷ್ಟರಲ್ಲಿ ಮಂತ್ರಿಕುಮಾರನು ಬಂದು ಸಾಷ್ಟಾಂಗ ನಮಸ್ಕಾರಮಾಡಿ ಕೈಜೋಡಿಸಿ ನಿಂತುಕೊಂಡನು. ಅರಸನು ಇವನನ್ನು ಸಮೀಪದಲ್ಲಿ ಕೂಡ್ರಿಸಿಕೊಂಡು—ಮೃದುಹೃದಯಾ, ಏಕೆ ಇಷ್ಟು ಕ್ಷೀಣನಾಗಿದ್ದೀ ?

ಮೃದುಹೃದಯ—ಪ್ರಭುವೇ, ಏಕೆ ಅಂದರೆ ನಾನೇನು ಹೇಳಲಿ ? ಪ್ರಿಯ ತಂದೆಯನ್ನೂ, ಒಬ್ಬಳೇ ತಂಗಿಯನ್ನೂ ಕಳೆದು ಕೊಂಡದ್ದರಿಂದ ಉಂಟಾದ ದುಃಖವು ನನ್ನನ್ನು ಈ ಸ್ಥಿತಿಗೆ ತಂದಿದೆ, ಮತ್ತೆ ಯಾವ ಕಾರಣವೂ ಇಲ್ಲ.

ಅರಸನು—ಹೌದು, ನಿಮ್ಮ ತಂದೆಯು ನನಗೆ ಪರಮ ಮಿತ್ರನು. ಆತನನ್ನು ಕಳೆದುಕೊಂಡದ್ದರಿಂದ ನನಗೇ ಇಷ್ಟು ದುಃಖವಿರುವಾಗ ಮಗನಾದ ನಿನಗೆ ಇಲ್ಲದಿರುವುದೇ ? ಅದರಲ್ಲಿಯೂ ತಂಗಿಯನ್ನು ಸಹಾ ಕಳೆದುಕೊಂಡೆ. ನಾನೇನುಮಾಡಲಿ ? ಸನ್ತಾಪಕನಲ್ಲದೆ ಮತ್ತೆ ಯಾರಾದರೂ ಅಂತಹ ಕೆಲಸವನ್ನು ಮಾಡಿದ್ದರೆ ಅವರಿಗೆ ಎಂತಹ ಶಿಕ್ಷೆಯನ್ನು ವಿಧಿಸುತ್ತಿದ್ದನೋ ತಿಳಿಯದು. ನನ್ನ ಸ್ವಂತ ಮಗನಾಗಿದ್ದರೂ ನಾನು ತಕ್ಕ ಪ್ರಾಯಶ್ಚಿತ್ತವನ್ನು ಮಾಡೇ ಮಾಡುತ್ತಿದ್ದೆನು. ನಾನೇನಾದರೂ ನನ್ನ ಸ್ವಂತ ಕೈಗಳಿಂದ ಶಿಕ್ಷೆಯನ್ನು ವಿಧಿಸಿದರೆ ಅವನ ತಾಯಿಗೆ ನನ್ನಮೇಲೆ ವಿರೋಧ ಉಂಟಾಗುತ್ತದೆ. ನಿಮ್ಮ ತಂದೆಯನ್ನು ಮಂತ್ರಿಯಂತೆ ಅಲ್ಲ ಸ್ವಂತ ಸಹೋದರನಿಗಿಂತಲೂ ಅತಿಯಾಗಿ ಪ್ರೀತಿಸುತ್ತಿದ್ದೆನು. ಆತನನ್ನು ಕಳೆದುಕೊಂಡದ್ದರಿಂದ ನನಗೆ ಉಂಟಾಗಿರುವ ನಷ್ಟವೆಷ್ಟೆಂದು ಹೇಳಲಾರೆನು. ನಿಮ್ಮ ತಂದೆಯ ಮರಣಕ್ಕೂ ಆ ಮೂಲಕ ನಿನ್ನ ಪ್ರಿಯತಂಗಿಯ ಮರಣಕ್ಕೂ ಅವನೇ ಕಾರಣನು. ಅವನು ಇನ್ನೂ ಯಾರ್ಯಾರನ್ನು ನುಂಗಿ ನೀರು ಕುಡಿಯಬೇಕೆಂದಿದ್ದಾನೋ

ತಿಳಿಯದು. ಅವನಿಗೆ ನಿನ್ನ ಮೇಲೆಯೂ ಬಹಳ ದ್ವೇಷವಿದೆ. ಆದರೆ ಹೊರಗೆ ತೋರಿಸಿಕೊಳ್ಳುವುದಿಲ್ಲ. ಅವನು ಮಹಾ ದುಷ್ಟನು, ನೀಚನು, ಕೊಲೆಪಾತಕನು. ಅವನನ್ನು ಶಿಕ್ಷಿಸಬೇಕಾದರೆ ನಿನ್ನೊಬ್ಬ ನಿಂದ ಹೊರತು ಬೇರೆ ಯಾರಿಂದಲೂ ಆಗುವುದಿಲ್ಲ. ಆ ದಿನ ಸಮಾಧಿಯಲ್ಲಿಯೇ ಅವನಿಗೆ ತಕ್ಕ ಶಿಕ್ಷೆಯನ್ನು ಮಾಡಿ ಅವನನ್ನು ಭೂಸ್ಥಾಪನೆ ಮಾಡುತ್ತೀ ಎಂದು ತಿಳಿದಿದ್ದೆನು. ನೀನು ಎತ್ತಿದ್ದ ಕೈಯನ್ನು ಇಳಿಸಬಾರದಾಗಿದ್ದಿತು. ಅವನು ನನ್ನ ಪರಮಾಪ್ತನಾದ ನಿಮ್ಮ ತಂದೆಗೂ ನಿನಗೂ ಶತ್ರುವಾದಮೇಲೆ ಅವನು ಮಗನ ಸ್ಥಾನ ದಲ್ಲಿದ್ದರೂ ನನಗೂ ಸಹಾ ಶತ್ರುವೆಂದೇ ಎಣಿಸಿದ್ದೇನೆ.

ಮೃದುಹೃದಯ—ಮಹಾಸ್ವಾಮಿ, ತಾವು ಅಪ್ಪಣೆ ಕೊಡಿ ಸಿದ್ದು ನಿಜವೇ. ಒಬ್ಬರಿಗೆ ಕೇಡು ಮಾಡುವುದು ಅಂದರೆ ನನಗೆ ಇಷ್ಟವಿಲ್ಲ. ಒಂದು ಸಣ್ಣ ಇರುವೆಯನ್ನಾದರೂ ನೋಯಿಸುವುದಕ್ಕೆ ನನ್ನ ಮನಸ್ಸು ಒಡಂಬಡುವುದಿಲ್ಲ. ಆ ದಿನ ನನ್ನ ಮನೋವ್ಯಥೆ ಯನ್ನು ತಡೆಯಲಾರದೆ ಆತುರಪಟ್ಟು ಅವನ ಮೈಮೇಲೆ ಕೈಹಾಕಿ ದೆನೇ ಹೊರತು ಬೇರೆ ಇಲ್ಲ. ಹೇಗೂ ಆತನು ಯುವರಾಜನು. ನನ್ನ ಬಾಲ್ಯಮಿತ್ರನು. ಅವನನ್ನು ಶಿಕ್ಷಿಸುವುದು ಅಂದರೆ ಕೊಲ್ಲುವುದೆಂದೇ ಅರ್ಥ. ಇದ್ದಕ್ಕಿದ್ದ ಹಾಗೆ ಅವನನ್ನು ಹೇಗೆ ಕೊಲ್ಲಲಿ ? ಪ್ರಜೆಗಳು ನನ್ನ ವಿಷಯವಾಗಿ ಏನು ಹೇಳಿಕೊಂಡಾರು ? ಪ್ರಜೆಗಳಿಗೆ ತಮ್ಮ ಮೇಲಿರುವ ಅಭಿಮಾನಕ್ಕಿಂತಲೂ ಅವನ ಮೇಲೆ ಹೆಚ್ಚು ಅಭಿಮಾನ ವಿದೆ. ಹಾಗೇನಾದರೂ ನಾನು ಅವನ ಮೇಲೆ ಕೈಮಾಡಿದರೆ ಪ್ರಜೆ ಗಳು ನನ್ನನ್ನು ಸುಮ್ಮನೇ ಬಿಡುವರೇ ? ತಾವೇ ಆಲೋಚಿಸಿ.

ಅರಸನು—ಮೃದುಹೃದಯಾ, ಇದಕ್ಕೆ ನಾನೊಂದು ಯುಕ್ತಿ ಯನ್ನು ಹೇಳಿಕೊಡುತ್ತೇನೆ ಕೇಳು. ನೀನೂ ಅವನೂ ಬಾಲ್ಯಮಿತ್ರ

ರೆಂದು ಎಲ್ಲರಿಗೂ ತಿಳಿದೇ ಇದೆ. ಖಡ್ಗ ಯುದ್ಧದಲ್ಲಿ ನೀವಿಬ್ಬರೂ ಒಬ್ಬರನ್ನೊಬ್ಬರು ಮೀರಿದ ಪರಾಕ್ರಮಶಾಲಿಗಳಾಗಿದ್ದೀರಿ. ಒಂದು ದಿನವನ್ನು ಗೊತ್ತುಮಾಡಿ ಆ ದಿನ ವಿನೋದಕ್ಕಾಗಿ ಖಡ್ಗಯುದ್ಧವನ್ನು ಮಾಡುವಂತೆ ಹೇಳಿಕಳುಹಿಸು. ಅವನಿಗೆ ಖಡ್ಗಯುದ್ಧದಲ್ಲಿ ಬಹಳ ಅಭಿರುಚಿಯಿದೆ. ಖಂಡಿತವಾಗಿ ಒಪ್ಪಿಕೊಳ್ಳುತ್ತಾನೆ. ವಿನೋದಕ್ಕಾಗಿ ಮಾಡುವ ಖಡ್ಗಯುದ್ಧದಲ್ಲಿ ಹದವಾದ ಬಾಯಿಯುಳ್ಳ ಖಡ್ಗವನ್ನು ಯಾರೂ ಉಪಯೋಗಿಸಬಾರದೆಂಬ ನಿಯಮವಿದ್ದಾಗ್ಯೂ ನೀನು ಹದವಾದ ಖಡ್ಗವನ್ನು ವಿಷದ ನೀರಿನಲ್ಲಿ ಎರಡು ಮೂರು ದಿನಗಳಿಟ್ಟು ಅದನ್ನು ಉಪಯೋಗಿಸು. ಈ ನಿನ್ನ ಖಡ್ಗದಿಂದ ಅವನಿಗೆ ಒಂದು ಚಿಕ್ಕ ಘಾಯವಾದಾಗ್ಯೂ ತಕ್ಷಣವೇ ಅವನ ಶರೀರಕ್ಕೆಲ್ಲಾ ವಿಷವು ವ್ಯಾಪಿಸಿ ಮೃತನಾಗುತ್ತಾನೆ. ಯಾವ ಅಪವಾದಕ್ಕೂ ಕಾರಣವಿರುವುದಿಲ್ಲ. ಮುಂದೇನಾದರೂ ನಾನು ನೋಡಿಕೊಳ್ಳುತ್ತೇನೆ. ಇಗೋ, ಈ ಪೊಟ್ಟಣದಲ್ಲಿರುವ ವಿಷದ ಪುಡಿಯನ್ನು ತೆಗೆದುಕೋ, ಭಯಪಡಬೇಡ. ದಿನವನ್ನು ಗೊತ್ತುಮಾಡಿ ಅವನಿಗೆ ಹೇಳಿ ಕಳುಹಿಸು. ತಂದೆಯ ಮತ್ತು ತಂಗಿಯ ಮರಣಕ್ಕೆ ಕಾರಣನಾದ ಆ ದುಷ್ಟನನ್ನು ಬಿಡಬಹುದೇ? ನೀನು ಎಂತಹ ಹುಚ್ಚನಾಗಿರಬೇಕು? ಭಯಪಡಬೇಡ ಹೋಗು.



# ಅಧ್ಯಾಯ 12

## ಕಪಟಾವತಿ, ಭುಜಂಗಮ, ಮೃದುಹೃದಯ ಮತ್ತು ಸನ್ತ್ರಾಪಕ ಇವರ ಮರಣ

ಮೃದುಹೃದಯನು ವಿಷದ ಪುಡಿಯನ್ನು ತೆಗೆದುಕೊಂಡು ತನ್ನ ನಿಜಭವನಕ್ಕೆ ಬಂದನು. ಅರಸನು ನೇಮಿಸಿದ ಕಾರ್ಯವು ಮೃದುಹೃದಯನಿಗೆ ಬಹು ಕ್ರೌರ್ಯವಾಗಿಯೂ ನ್ಯಾಯವಿರುದ್ಧ ವಾಗಿಯೂ ಕಂಡಿತು. ಮನಸ್ಸಾಕ್ಷಿಯು ಒಂದುಕಡೆ ಬಾಧಿಸು ತ್ತಿದ್ದರೆ ಅರಸನ ಆಜ್ಞೆಯನ್ನು ನಿರಾಕರಿಸಿ ಅವನ ಕೋಪಕ್ಕೆ ಪಾತ್ರ ನಾಗುವ ಭಯವು ಮತ್ತೊಂದುಕಡೆ ಬಾಧಿಸುತ್ತಿದ್ದಿತು. ಆದರೂ ತನ್ನ ತಂದೆಯ ಮತ್ತು ತಂಗಿಯ ಮರಣದ ನೆನಪಿನಿಂದುಂಟಾದ ಕೋಪವು ಹೃದಯದಲ್ಲಿ ತಲೆದೋರಿ, ಹಗೆಯಾಂತು, ಅರಸನು ಹೇಳಿದಂತೆಯೇ ಹದವಾದ ತನ್ನ ಖಡ್ಗಕ್ಕೆ ವಿಷವನ್ನು ಕುಡಿಸಿ, ಇಂತಹ ದಿನ ಇಂತಹ ಸಮಯಕ್ಕೆ ತನ್ನ ಸಂಗಡ ಕಪಟ ಖಡ್ಗ ಯುದ್ಧವನ್ನು ಮಾಡಲು ಸಿದ್ಧವಾಗುವುದೆಂದು ಸನ್ತ್ರಾಪಕನಿಗೆ ಹೇಳಿ ಕಳುಹಿಸಿದನು.

ಇತ್ತ ಭುಜಂಗಮನು ತನ್ನ ಮನಸ್ಸಿನಲ್ಲಿ—ಈ ಸಾರಿ ಸನ್ತ್ರಾಪಕ ನಿಗೂ ಮೃದುಹೃದಯನಿಗೂ ಆಗುವ ಕಪಟ ಖಡ್ಗಯುದ್ಧದಲ್ಲಿ ಸನ್ತ್ರಾಪಕನು ಉಳಿಯುವಹಾಗಿಲ್ಲ. ಈ ಯುದ್ಧದಲ್ಲಿ ಇವನು ಮಡಿದರೂ ತನ್ನ ಮೇಲೆ ಯಾವ ಅಪವಾದವೂ ಬಾರದೆ ಏನೋ ಅಚಾತುರ್ಯದಿಂದ ಮಡಿದನೆಂದು ಜನರು ಹೇಳಿಕೊಳ್ಳುವ ಹಾಗಾಗುತ್ತದೆ. ಒಂದುವೇಳೆ ಇದರಲ್ಲಿಯೂ ಇವನಿಗೆ ಮರಣ ವಿಲ್ಲದೆ ಹೋದರೆ ಮತ್ತೊಂದು ವಿಧದಿಂದಲಾದರೂ ಇವನನ್ನು

ಕೊಲ್ಲಲೇಬೇಕು ಎಂದು ಆಲೋಚಿಸಿ, ಎರಡು ಬಟ್ಟಲುಗಳಲ್ಲಿ ಪಾನಕವನ್ನು ತುಂಬಿ ಒಂದು ಬಟ್ಟಲಿನಲ್ಲಿ ವಿಷವನ್ನು ಮಿಶ್ರಮಾಡಿ, ಸನ್ತಾಪಕನು ಯುದ್ಧದಲ್ಲಿ ದಣಿದು ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಳ್ಳಲು ಬಂದಾಗ ಏನಾದರೂ ಒಂದು ಉಪಚಾರದ ಮಾತನ್ನು ಹೇಳಿ ತಾನು ಪಾನಕವನ್ನು ಕುಡಿದು ಸನ್ತಾಪಕನಿಗೆ ವಿಷಮಿಶ್ರವಾದ ಪಾನಕವನ್ನು ಕುಡಿಸಬೇಕೆಂದು ನಿರ್ಧರಿಸಿಕೊಂಡು ಆ ದಿನಕ್ಕಾಗಿ ಆತುರದಿಂದ ಎದುರುನೋಡುತ್ತಿದ್ದನು.

ನೇಮಕವಾದ ದಿನವು ಬಂದಿತು. ಯುದ್ಧಕ್ಕಾಗಿ ಸನ್ತಾಪಕನು ಸಿದ್ಧನಾಗಿ ತನ್ನ ಮನೆಯಿಂದ ಹೊರಡುವಷ್ಟರಲ್ಲಿ ಮಿತ್ರನಾದ ಸೌಮಿತ್ರಕನು ಅಲ್ಲಿಗೆ ಬಂದು—ಯುವರಾಜಾ, ಎಲ್ಲಿಗೆ ಹೊರಟಿದ್ದೀಯೆ ?

ಸನ್ತಾಪಕ—ಎಲ್ಲಿಗೆಂದು ನಿನಗೆ ತಿಳಿಯದೇ? ಖಡ್ಗಯುದ್ಧಕ್ಕೆ.

ಮಿತ್ರ—ಯಾರೊಂದಿಗೆ ?

ಸನ್ತಾಪಕ—ಮಿತ್ರನೇ, ನಿನಗೆ ಹೇಳುವುದಕ್ಕೆ ಹೇಗೆ ಮರೆತೆನೋ ನನಗೆ ತಿಳಿಯದು. ಐದಾರು ದಿನಗಳ ಹಿಂದೆ ತನ್ನ ಸಂಗಡ ಕಪಟ ಖಡ್ಗಯುದ್ಧವನ್ನು ಮಾಡಲು ಮೃದುಹೃದಯನು ಹೇಳಿಕಳುಹಿಸಿದನು. ಅದಕ್ಕಾಗಿ ಹೊರಟಿದ್ದೇನೆ.

ಮಿತ್ರ—ಏನು ? ಮೃದುಹೃದಯನೊಂದಿಗೆ ಖಡ್ಗಯುದ್ಧವೇ? ಚೆನ್ನಾಯಿತು. ಬರುವುದಿಲ್ಲವೆಂದು ತಕ್ಷಣವೇ ಹೇಳಿಕಳುಹಿಸು.

ಸನ್ತಾಪಕ—ಮಿತ್ರಾ, ಏಕೆ ಹಾಗೆನ್ನುತ್ತಿ ?

ಮಿತ್ರ—ನಾಗರಹಾವು ನೋಡಲು ಎಷ್ಟು ಸೊಗಸಾಗಿದ್ದರೂ ಅದರೊಳಗಿರುವ ವಿಷವು ಯಾರ ಕಣ್ಣಿಗೂ ಕಾಣಿಸುವುದಿಲ್ಲ. ಅದರಂತೆಯೇ ಮೃದುಹೃದಯನೆಂದು ತಿಳಿದುಕೋ.

ಸನ್ತ್ರಾಪಕ—ಅವನು ಅಂತಹವನಲ್ಲ. ಇದು ವಿನೋದಕ್ಕಾಗಿ ಮಾಡುವ ಯುದ್ಧವು. ಹೊತ್ತೂ ಬೇಸರಿಕೆಯೂ ಕಳೆಯುವುದಕ್ಕೇ ಹೊರತು ಮತ್ತೇನೂ ಅಲ್ಲ. ಅಲ್ಲದೆ ಅವನು ಸಹ ನಮ್ಮ ಬಾಲ್ಯಸ್ನೇಹಿತನು. ಅವನಲ್ಲಿ ಅಂತಹ ವಿಷವೇನೂ ಇಲ್ಲ.

ಮಿತ್ರ—ಮೊದಲು ಇರಲಿಲ್ಲ. ಅವನ ತಂದೆಯನ್ನು ನೀನು ಯಾವಾಗ ಕೊಂದೆಯೋ, ಆ ತಂದೆಯ ಮರಣದಿಂದ ಬುದ್ಧಿವಿಕಲ್ಪವಾಗಿ, ಅವನ ತಂಗಿಯು ಯಾವಾಗ ನೀರಿನಲ್ಲಿ ಬಿದ್ದು ಮೃತಳಾದಳೋ ಅಂದಿನಿಂದಲೇ ಹಗೆತನವೆಂಬ ವಿಷದ ಬೀಜವು ಅವನ ಹೃದಯದಲ್ಲಿ ಮೊಳೆತು ದೊಡ್ಡದಾಗಿ ಫಲ ಬಿಟ್ಟಿದೆ. ನಿನ್ನನ್ನು ಈಗ ಖಡ್ಗಯುದ್ಧಕ್ಕಾಗಿ ಕರೆಯುವುದು ಆ ವಿಷಫಲವನ್ನು ಊಟ ಮಾಡಿಸುವುದಕ್ಕಾಗಿಯೇ. ನೀನು ಖಂಡಿತವಾಗಿ ಹೋಗಬೇಡ. ಈ ವಿಷಯದಲ್ಲಿ ನನಗೆ ಬಹಳ ಸಂಶಯವಿದೆ.

ಸನ್ತ್ರಾಪಕ—ಅವನು ಅದೆಲ್ಲವನ್ನೂ ಮರೆತಿರುವನು. ಈಚೆಗೆ ಮಿತ್ರಭಾವದಿಂದಲೇ ವರ್ತಿಸುತ್ತಿದ್ದಾನೆ. ಅಂತಹ ಹಗೆತನವೇನೂ ಅವನಲ್ಲಿಲ್ಲ.

ಮಿತ್ರ—ನಿಮ್ಮ ತಂದೆಯ ಮರಣಕ್ಕೆ ಕಾರಣನಾದ ಭುಜಂಗಮನ ಮೇಲೆ ನಿನಗೆ ಹಗೆತನವಿಲ್ಲವೇ? ಅದನ್ನು ನೀನು ಮರತೆಯಾ? ಇನ್ನಾದರೂ ಅವನಿಗೆ ಪ್ರತಿಕ್ರಿಯೆಮಾಡಲು ದಿವಾರಾತ್ರಿಗಳಲ್ಲಿಯೂ ಸಮಯ ಸಂದರ್ಭಗಳಿಗಾಗಿ ನಿರೀಕ್ಷಿಸುತ್ತಿಲ್ಲವೇ? ಸಕಲಶಾಸ್ತ್ರ ಪಾರಂಗತನಾದ ನೀನೇ ಪಿತೃವಾತ್ಸಲ್ಯದಿಂದ ಕೊರಗುತ್ತಿರುವಲ್ಲಿ ಅವನ ಪಾಡೇನು? ನೀನೇ ಯೋಚಿಸು. ಖಂಡಿತವಾಗಿ ಹೋಗಬೇಡ.

ಸನ್ತ್ರಾಪಕ—ಮಿತ್ರಾ, ನಿನ್ನ ಮಾತೇನೋ ನಿಜವೇ. ನಾನು ಬರುತ್ತೇನೆಂದು ಮಾತುಕೊಟ್ಟಿದ್ದೇನೆ. ಮಾತಿಗೆ ತಪ್ಪಲು ನನಗೆ

ಮನಸ್ಸಿಲ್ಲ. ಆದದ್ದಾಗಲಿ. ಹೊತ್ತಾಗುತ್ತಾ ಬಂದಿತು, ಹೋಗೋಣ ಬಾ ಎಂದು ಇಬ್ಬರೂ ವಿನೋದ ಖಡ್ಗಯುದ್ಧಕ್ಕಾಗಿ ನೇಮಕವಾಗಿದ್ದ ಸ್ಥಳಕ್ಕೆ ಬಂದರು.

ಇವರು ಬರುವುದರೊಳಗಾಗಿ ಅರಸನಾದ ಭುಜಂಗಮನೂ ಮಹಾರಾಣಿಯಾದ ಕಪಟಾವತಿಯೂ ರಾಜ್ಯಾಧಿಕಾರಿಗಳೂ ಪ್ರಜಾಮುಖಂಡರೂ ಪರ್ತಕಮಹಾಶಯರೂ ಸಾವಿರಾರು ಮಂದಿ ಪ್ರಜೆಗಳೂ ನೆರೆದಿದ್ದರು. ಮೃದುಹೃದಯನು ಸಿದ್ಧನಾಗಿ, ಸನ್ತಾಪಕನ ಹಾದಿಯನ್ನೇ ನೋಡುತ್ತಿದ್ದನು. ಸಾಯಂಕಾಲ ಐದು ಘಂಟೆಗೆ ಸನ್ತಾಪಕನೂ ಸೌಮಿತ್ರಕನೂ ಬಂದರು. ಸನ್ತಾಪಕನು ಖಡ್ಗಯುದ್ಧರಂಗಕ್ಕೆ ಬಂದನು. ಜನಸಮೂಹವು ಜಯಧ್ವನಿ ಮಾಡಲಾರಂಭಿಸಿತು. ಸನ್ತಾಪಕನು ಮೃದುಹೃದಯನನ್ನು ಮಿತ್ರಭಾವದಿಂದ ಆಲಂಗಿಸಿ, ಮೃದುಹೃದಯಾ! ನಾವಿಬ್ಬರೂ ಮಿತ್ರರಲ್ಲವೇ? ಕಡೇವರೆಗೂ ನಮ್ಮ ಮಿತ್ರತ್ವವು ನೆಲೆಗೊಳ್ಳುವಂತೆ ವರ್ತಿಸೋಣ ಎಂದು ಹೇಳಿ ಇಬ್ಬರೂ ಖಡ್ಗಪಾಣಿಗಳಾಗಿ ಯುದ್ಧವನ್ನು ಪ್ರಾರಂಭಿಸಿದರು. ಖಡ್ಗಯುದ್ಧದಲ್ಲಿ ಇವರಿಬ್ಬರೂ ಇಡೀ ರಾಜ್ಯದಲ್ಲೆಲ್ಲಾ ಖ್ಯಾತಿಗೊಂಡಿದ್ದರು. ಒಬ್ಬರನ್ನೊಬ್ಬರು ಮೀರಿಸುವವರಾಗಿದ್ದರು. ಮೃದುಹೃದಯನ ತಂತ್ರವು ಸನ್ತಾಪಕನಿಗೆ ತಿಳಿಯದಿದ್ದುದರಿಂದ ಅವನ ಕೈಯಲ್ಲಿದ್ದ ಖಡ್ಗವನ್ನು ಎಚ್ಚರಿಕೆಯಿಂದ ಪರೀಕ್ಷಿಸಲಿಲ್ಲ. ಈ ಯುದ್ಧಕ್ರಮಕ್ಕನುಸಾರವಾಗಿ ಉಭಯರೂ ಮೊಂಡು ಕತ್ತಿಗಳನ್ನು ಹೊರತು ಹದವಾದ ಖಡ್ಗಗಳನ್ನು ಉಪಯೋಗಿಸುವುದು ನ್ಯಾಯವಿರುದ್ಧವಾಗಿದ್ದಿತು. ಇದಕ್ಕಾಗಿಯೇ ಸನ್ತಾಪಕನು ಮೊಂಡುಕತ್ತಿಯನ್ನು ಆರಿಸಿಕೊಂಡನು. ಮೃದುಹೃದಯನ ಕೈಯಲ್ಲಿದ್ದ ಖಡ್ಗವಾದರೋ ಹದವಾಗಿಯೂ ವಿಷಕುಡಿಸಿದುದಾಗಿಯೂ ಇದ್ದಿತು. ಮೃದುಹೃದಯನು ನ್ಯಾಯವಿರುದ್ಧವಾಗಿ

ವರ್ತಿಸುವನೆಂಬು ಸನ್ತ್ರಾಪಕನಿಗೆ ತಿಳಿದೇ ಇರಲಿಲ್ಲ. ಯುದ್ಧದ ಮೊದಮೊದಲು ಸನ್ತ್ರಾಪಕನೇ ಗೆಲ್ಲುವಂತೆ ಮೃದುಹೃದಯನು ಆಸ್ಪದ ಕೊಟ್ಟನು. ಅಲ್ಲಿ ನೆರೆದಿದ್ದ ಅರಸನು ಮೊದಲುಗೊಂಡು ಎಲ್ಲರೂ ಮಹಾಜಯಘೋಷವನ್ನು ಮಾಡಿ ಸನ್ತ್ರಾಪಕನೇ ಗೆಲ್ಲುತ್ತಾನೆಂದು ಕೆಲವರೂ, ಮೃದುಹೃದಯನೇ ಗೆಲ್ಲುತ್ತಾನೆಂದು ಕೆಲವರೂ, ಒಬ್ಬರಿಗೊಬ್ಬರು ಪಂದ್ಯ ಹಾಕಿಕೊಳ್ಳಲು ಪ್ರಾರಂಭಿಸಿದರು. ಇಬ್ಬರೂ ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳುವುದಕ್ಕೆ ಕುಳಿತರು. ಅರಸನು ಬಟ್ಟಲಿನಲ್ಲಿದ್ದ ಪಾನಕವನ್ನು ಕೈಗೆ ತೆಗೆದುಕೊಂಡು ಕುಡಿಯುತ್ತಾ ವಿಷಮಿಶ್ರವಾದ ಪಾನಕವಿದ್ದ ಬಟ್ಟಲನ್ನು ಸನ್ತ್ರಾಪಕನಿಗೆ ಕೊಟ್ಟು, ಕುಮಾರಾ! ಖಡ್ಗಯುದ್ಧದಲ್ಲಿ ನೀನು ಇಂತಹ ನಿಪುಣನೆಂದು ಇದುವರೆಗೂ ನನಗೆ ತಿಳಿದಿರಲಿಲ್ಲ. ಭಲಾ! ಮಗನೇ, ಭಲಾ! ನಮ್ಮ ವಂಶಕ್ಕೆ ನೀನು ತಿಲಕಪ್ರಾಯನೇ ಸರಿ. ಬಹಳ ದಣಿದಿದ್ದೀ. ಈ ಪಾನಕವನ್ನು ಕುಡಿದು ಸ್ವಲ್ಪ ಸುದಾರಿಸಿಕೊ ಎಂದು ಹೇಳಿದಾಗ ಸನ್ತ್ರಾಪಕನು ಈಗ ಪಾನಕವೇನೂ ನನಗೆ ಅವಶ್ಯವಿಲ್ಲ. ಯುದ್ಧವು ಪೂರ್ತಿಯಾದ ಮೇಲೆ ಕುಡಿಯುತ್ತೇನೆ. ಅದುವರೆಗೂ ಅಲ್ಲೇ ಇರಲಿ, ಎಂದು ಹೇಳಿ ಇಬ್ಬರೂ ಯುದ್ಧರಂಗಕ್ಕೆ ಬಂದು ಯುದ್ಧವನ್ನು ಪ್ರಾರಂಭಿಸಿದರು. ಸ್ವಲ್ಪ ಹೊತ್ತಾದ ತರುವಾಯ ಇಬ್ಬರಿಗೂ ಆವೇಶ ತುಂಬಿತು. ಮೃದುಹೃದಯನು ತನ್ನ ತೀಕ್ಷ್ಣವೂ ವಿಷಭರಿತವೂ ಆದ ಖಡ್ಗದಿಂದ ಸನ್ತ್ರಾಪಕನನ್ನು ಬಲವಾಗಿ ತಿವಿದನು. ಈ ಖಡ್ಗದ ವಿಷಯವಾಗಿ ಏನೂ ತಿಳಿಯದ ಸನ್ತ್ರಾಪಕನು ಕೋಪೋದ್ರೇಕನಾಗಿ ಮೃದುಹೃದಯನ ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು ಅದೇ ಖಡ್ಗದಿಂದ ಅವನನ್ನು ಇರಿದನು.

ಯುದ್ಧದಲ್ಲಿ ಸನ್ತ್ರಾಪಕನು ಸಾಯದಿದ್ದರೆ ಈ ವಿಷದ ಪಾನಕವನ್ನಾದರೂ ಕುಡಿಸಿ ಕೊಲ್ಲಬೇಕೆಂದು ಅರಸನು ಅವನಿಗಾಗಿ ಸಿದ್ಧ

ಮಾಡಿಟ್ಟಿದ್ದ ಪಾನಕವನ್ನು ದಾಹಗೊಂಡಿದ್ದ ಮಹಾರಾಣಿಯಾದ ಕಪಟಾವತಿಯು ಅದು ಏನೆಂದರಿಯದೆ ಎತ್ತಿ ಕುಡಿದು ಸ್ವಲ್ಪ ಹೊತ್ತಿನ ತರುವಾಯ ವಿಷಾ, ವಿಷಾ, ವಿಷಾ, ಎಂದು ಕೂಗಿ ಕೊಂಡು ಕೆಳಗೆ ಬಿದ್ದು ತಕ್ಷಣವೇ ಮೃತಳಾದಳು. ವಿಷದ ಪಾನ ಕದ ವಿಷಯವಾಗಿ ಭುಜಂಗಮನು ಆಕೆಗೆ ಭಯದಿಂದ ತಿಳಿಸಿರಲಿಲ್ಲ. ತಕ್ಷಣವೇ ಸನ್ತಾಪಕನಲ್ಲಿ ಏನೋ ಒಂದುವಿಧವಾದ ಸಂಶಯವು ತಲೆದೋರಿ, ಸುತ್ತುಮುತ್ತಲಿರುವ ಬಾಗಿಲುಗಳನ್ನೆಲ್ಲಾ ಮುಚ್ಚು ವಂತೆ ಆಜ್ಞಾಪಿಸಿದನು. ಆಗ ಘಾಯಗೊಂಡು ನಿಶ್ಶಕ್ತನಾಗಿ ನೆಲ ದಲ್ಲಿ ಉರುಳಿಕೊಂಡಿದ್ದ ಮೃದುಹೃದಯನು, ಯುವರಾಜಾ! ಬಾಗಿಲು ಗಳನ್ನೇಕೆ ಮುಚ್ಚಿಸಿದೆ? ವಿಶ್ವಾಸಘಾತುಕನು ನಾನೇ ಮತ್ತೊಬ್ಬ ರಲ್ಲ. ಯುವರಾಜಾ! ಯುವರಾಜಾ! ನನ್ನ ಖಡ್ಗದಿಂದ ನೀನು ನನಗೆ ಮಾಡಿದ ಘಾಯವು ನನ್ನನ್ನು ಸಾವಿಗೆ ಸಮೀಪ ಗೊಳಿಸುತ್ತಿದೆ. ನಾನು ತೋಡಿದ ಕುಳಿಯಲ್ಲಿ ನಾನೇ ಬಿದ್ದೆನು. ನಾನು ಬಹಳಹೊತ್ತು ಜೀವಿಸಿರಲಾರೆ! ಇನ್ನು ಕೆಲವು ನಿಮಿಷಗಳಲ್ಲಿ ನನ್ನ ಪ್ರಾಣವು ಹೋಗುವುದು. ಯಾಕೆಂದರೆ, ಅಗೋ ಆ ಭುಜಂಗಮನ ಮಾತುಕೇಳಿ, ವಿಷಕುಡಿಸಿದ ಹದವಾದ ಖಡ್ಗವನ್ನು ನಾನು ಉಪ ಯೋಗಿಸಿ ನಿನ್ನನ್ನು ತಿವಿದೆನು. ಅದರಿಂದ ಸ್ವಲ್ಪ ಘಾಯವಾದಗೂ ಜೀವಿಸುವುದು ಅಸಾಧ್ಯ. ವಿಷವು ಆ ಸ್ವಲ್ಪ ಘಾಯದ ಮೂಲಕ ಶರೀರಾದ್ಯಂತವನ್ನೂ ವ್ಯಾಪಿಸಿ ಮರಣವನ್ನುಂಟುಮಾಡುವಷ್ಟು ಭಯಂಕರವಾದುದು. ನೀನು ಸಹಾ ಬಹಳ ಹೊತ್ತು ಬದುಕಿರ ಲಾರೆ. ನಾನು ನಿನ್ನನ್ನು ಘಾಯಪಡಿಸಿರುವುದು ಅದೇ ಖಡ್ಗದಿಂದಲೇ. ಅರಸನಾದ ಭುಜಂಗಮನ ಮಾತು ಕೇಳಿ ನಾನು ಕೆಟ್ಟೆನು. ಯುವ ರಾಜಾ! ನಾನು ನಿನಗೆ ವಿರೋಧವಾಗಿ ಮಹಾದ್ರೋಹವನ್ನು ಮಾಡಿದೆನು. ನನ್ನ ಸರ್ವಾಪರಾಧವನ್ನು ಕ್ಷಮಿಸು. ಹಾ! ದುರುಳ

ಅರಸನೇ! ಈ ಅನಾಹುತಗಳಿಗೆಲ್ಲಾ ನೀನೇ ಕಾರಣನಲ್ಲವೇ! ನೀನೇ ನೀನೇ. ಯುವರಾಜಾ! ನೀನಿರುವುದು ಕೆಲವು ನಿಮಿಷಗಳೇ. ಕ್ಷಮಿಸು, ಕ್ಷಮಿಸು ಎಂದು ಬೇಡಿಕೊಂಡು ಕಣ್ಣು ಮುಚ್ಚಿ ಮೃತನಾದನು.

ಮೃದುಹೃದಯನ ಆಟವೆಲ್ಲವೂ ಇಲ್ಲಿಗೆ ಮುಗಿದಂತಾಯಿತು.

ಇಷ್ಟರಲ್ಲಿ ಸನ್ತಾಪಕನಿಗೆ ಆದ ಘಾಯದ ಮೂಲಕ ವಿಷವು ಶರೀರವನ್ನೆಲ್ಲಾ ವ್ಯಾಪಿಸುತ್ತಿದ್ದುದರಿಂದ ತನ್ನ ಅಂತ್ಯವು ಸಮೀಪ ವಾಯಿತೆಂದು ಪರಿಷ್ಕಾರವಾಗಿ ತಿಳಿದುಕೊಂಡನು. ಕೂಡಲೇ ತನ್ನ ಕೈಯ್ಯಲ್ಲಿದ್ದ ಮೃದುಹೃದಯನ ಖಡ್ಗದಲ್ಲಿ ಇನ್ನೂ ಸ್ವಲ್ಪ ವಿಷವು ಇದ್ದುದನ್ನು ನೋಡಿ ಅರಸನಾದ ಭುಜಂಗಮನ ಮೇಲೆ ಬಿದ್ದು ಅವನ ಹೃದಯಕ್ಕೆ ಬಲವಾಗಿ ತಿವಿದನು. ಆ ಭಯಂಕರ ವಾದ ವಿಷದ ಪ್ರಭಾವದಿಂದ ಭುಜಂಗಮನು ತಕ್ಷಣವೇ ಸತ್ತು ಕೆಳಗೆ ಬಿದ್ದನು. ಸನ್ತಾಪಕನು ತನ್ನ ಪಿತೃಭೂತಕ್ಕೆ ಮಾಡಿದ್ದ ವಾಗ್ದಾನವು ಕೊನೆಗೆ ನೆರವೇರಿತು.

ಸನ್ತಾಪಕನಿಗೂ ಮರಣದ ಘಳಿಗೆಯು ಸಮೀಪವಾಯಿತು. ಕೈಕಾಲುಗಳು ತಣ್ಣಗಾಗುತ್ತಾ ಬಂದವು. ಮೈಯೆಲ್ಲಾ ಬಿಳುಪೇರಿತು. ಧಡಮ್ಮನೆ ನೆಲಕ್ಕೆ ಬಿದ್ದುಬಿಟ್ಟನು. ಜೊತೆಯಲ್ಲಿ ಬಂದಿದ್ದ ಮಿತ್ರ ನಾದ ಸೌಮಿತ್ರಕನು ಕಣ್ಣೆದುರಿನಲ್ಲಿ ನಡೆದ ಯಾವತ್ತು ಭಯಂಕರ ವಾದ ಸಂಗತಿಗಳನ್ನೂ, ಮರಣಕಾಲ ಸಮೀಪಿಸುತ್ತಿರುವ ತನ್ನ ಪ್ರಿಯಮಿತ್ರನಾದ ಯುವರಾಜನನ್ನೂ ನೋಡಿ—ನನ್ನ ಯುವ ರಾಜನೇ ಹೋದಮೇಲೆ ನಾನು ಜೀವಿಸಿ ಪ್ರಯೋಜನವೇನು? ಯಾವ ಸುಖಸಂತೋಷಗಳನ್ನು ಅನುಭವಿಸಬೇಕಾಗಿದೆ? ಎಂದು ಸನ್ತಾಪಕನ ಪಕ್ಕದಲ್ಲಿದ್ದ ವಿಷಖಡ್ಗದಿಂದ ತಾನೂ ಆತ್ಮಹತ್ಯ ಮಾಡಿಕೊಳ್ಳಲು ಸಮೀಪಕ್ಕೆ ಬಂದು ಖಡ್ಗವನ್ನು ಕೈಯಲ್ಲಿ ಹಿಡಿ ದನು. ಮರಣಾವಸ್ಥೆಯಲ್ಲಿದ್ದ ಸನ್ತಾಪಕನು ಇವನ ಇಂಗಿತ

ವನ್ನರಿತು—ಮಿತ್ರಾ, ನಿಲ್ಲು, ನಿಲ್ಲು; ಆತ್ಮಹತ್ಯ ಮಾಡಿಕೊಳ್ಳಬೇಡ. ನೀನು ನಿಜವಾಗಿ ನನ್ನನ್ನು ಪ್ರೀತಿಸುವವನೂ ನನ್ನ ಆಪ್ತ ಮಿತ್ರನೂ ಆಗಿದ್ದ ಪಕ್ಷದಲ್ಲ ನೀನು ಜೀವಿಸಿ, ಭುಜಂಗಮನು ನನ್ನ ತಂದೆಗೆ ಮಾಡಿದ ದ್ರೋಹವನ್ನೂ, ನಾನು ಆ ನನ್ನ ಪಿತೃಭೂತಕ್ಕೆ ಮಾಡಿದ ವಾಗ್ದಾನವನ್ನು ಹೇಗೆ ನೆರವೇರಿಸಿದೆನೆಂಬುದನ್ನೂ ಇಡೀ ಲೋಕಕ್ಕೆ ತಿಳಿಸು. ನೀನು ಒಂದು ವೇಳೆ ಆತ್ಮಹತ್ಯ ಮಾಡಿಕೊಂಡರೆ ಚಂದ್ರಗಿರಿ ರಾಜ್ಯಾಧಿಪನಾದ ಚಂದ್ರಶೇಖರರಾಯನ, ಆತನ ಮಗನಾದ ನನ್ನ ಹೆಸರೇ ಅಳಿದು ಹೋಗುತ್ತದೆ. ಮಿತ್ರಾ, ಹೆಚ್ಚು ಮಾತನಾಡಲು ಶಕ್ತಿಯಿಲ್ಲ. ಬಾಯಿ ತೊದಲುವುದಕ್ಕೆ ಆರಂಭಿಸಿತು. ನಾನು ಈ ನನ್ನ ಕಡೇ ಘಳಿಗೆಯಲ್ಲಿ ನಿನಗೆ ಆಜ್ಞಾಪಿಸಿದುದನ್ನು ನೆರವೇರಿಸುತ್ತೇನೆಂದು ವಾಗ್ದಾನಮಾಡು ಎಂದು ಬಲಹೀನವಾಗಿ ತಣ್ಣಗಾಗಿದ್ದ ತನ್ನ ಕೈಚಾಚಿದನು. ಸೌಮಿತ್ರಕನ ದುಃಖವಾದರೋ ಹೇಳತೀರದು. ಮಾತಾಡಲು ಬಾಯಿಯೇ ಬರುವುದಿಲ್ಲ. ಕಣ್ಣಿನಿಂದ ನೀರ್ಗರಿಸುತ್ತಾ, ಯುವರಾಜಾ! ನನ್ನ ಪ್ರಿಯ ಮಿತ್ರಾ! ನಿನ್ನ ಆಜ್ಞೆಯಂತೆಯೇ ಮಾಡುತ್ತೇನೆಂದು ಕೈಮುಟ್ಟಿ ವಾಗ್ದಾನ ಮಾಡಿದನು. ಸನ್ತಾಪಕನ ಮನಸ್ಸಿಗೆ ಆಗ ಸಮಾಧಾನವಾಗಿ—ಮಿತ್ ತ್ ರಾ....ತಂದೆಯ ಭೂತಕ್ಕೆ....ನಾ....ನು....ಮಾ....ಡಿದ....ವಾಗ್ ದಾ....ನವನ್ನು ನೆರವೇ....ರಿ....ಸಿದೆನು....ಎಂದು ಕಡೇ ಶ್ವಾಸವನ್ನುಬಿಟ್ಟನು. ಸನ್ತಾಪಕನ ಸನ್ತಾಪವು ಸಮಾಪ್ತವಾಯಿತು. ಇಷ್ಟರಲ್ಲಿಸೂರ್ಯನು ಅಸ್ತಮಿಸಿದನು. ಅಲ್ಲಿದ್ದವರೆಲ್ಲಾ ಕಣ್ಣೀರಿಡುತ್ತಾ, ಆತನ ಗುಣಸ್ವಭಾವಗಳನ್ನು ಹೊಗಳುತ್ತಾ, ಅಕಟಕಟಾ! ಈ ಚಂದ್ರಗಿರಿ ರಾಜ್ಯವು ಅನಾಯಿಕವಾಯಿತೇ? ಎಂದು ತಮ್ಮ ಪ್ರಿಯ ಯುವರಾಜನ ಶವಸಂಸ್ಕಾರಕ್ಕಾಗಿ ಅಣಿ ಮಾಡಲು ಆ ಸ್ಥಳದಿಂದ ಹೊರಟು ಹೋದರು.

**ಸಮಾಪ್ತ**